

೩೫೪

# ಮಕ್ಕಳ ಮಾರಕ ರೋಗಗಳು ಹಾಗೂ ಪ್ರತಿಬಂಧಕ ಉಪಾಯಗಳು

ಡಾ. ಆರ್. ಸಿ. ಅಗಡಿ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

೧೯೮೭

ಉಪನ್ಯಾಸ ಗ್ರಂಥಮಾಲೆ

೩೫೪

# ಮಕ್ಕಳ ಮಾರಕ ರೋಗಗಳು ಹಾಗೂ ಪ್ರತಿಬಂಧಕ ಉಪಾಯಗಳು

ಡಾ. ಆರ್. ಸಿ. ಅಗಡಿ






ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಸಪ್ಟಂಬರ, ೧೯೮೭

ಪ್ರಕಾಶಕರು:

ಎಸ್. ಬಿ. ನಾಯಕ
ನಿರ್ದೇಶಕರು
ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫೦೦೦ ಪ್ರತಿಗಳು
ಸಪ್ಟೆಂಬರ, ೧೯೮೨



ಬೆಲೆ: ೫೦ ಪೈಸೆ

ಮುದ್ರಕರು :

ಜಿ. ಬಿ. ಮನ್ನಾಚಾರ
ಕಾರ್ಯನಿರ್ವಾಹಕ ನಿರ್ದೇಶಕರು
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ
ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿದೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವ ದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೫೩ ಪುಸ್ತಿಕೆಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿ ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

**ಜಿ.ಕೆ.ನಾರಾಯಣ ರೆಡ್ಡಿ**
ಕುಲಪತಿ

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಆಶ್ರಯದಲ್ಲಿ ಬೆಳಗಾಂವಿ ಜಿಲ್ಲೆಯ ನಾಗನೂರಲ್ಲಿ ಏರ್ಪಟ್ಟ ಉಪನ್ಯಾಸ ಶಿಬಿರದಲ್ಲಿ ಭಾಗವಹಿಸಲು ಅನುಕೂಲ ಮಾಡಿಕೊಟ್ಟ ವಿಶ್ವವಿದ್ಯಾಲಯದ ಪ್ರಸಾರಾಂಗದ ಆಗಿನ ನಿರ್ದೇಶಕರಾದ ಶ್ರೀ ಚೆನ್ನವೀರ ಕಣವಿ ಅವರಿಗೂ ಮತ್ತು ಈಗಿನ ನಿರ್ದ್ರೇಶಕರಾದ ಶ್ರೀ ಎಸ್.ಬಿ.ನಾಯಕ ಅವರಿಗೂ ನನ್ನ ನಮನಗಳು ಹಾಗು ಈ ವಿಷಯವನ್ನು ಪ್ರಕಟನೆಗೆ ತೆಗೆದುಕೊಂಡ ವಿಶ್ವವಿದ್ಯಾಲಯಕ್ಕೆ, ಆತ್ಮೀಯರಾದ ಶ್ರೀ ಎಲ್. ಎಂ. ಗುಡ್ಡೀನ ಹಾಗು ಶ್ರೀ ಈಶ್ವರ ಕಮ್ಮಾರ, ಶ್ರೀ ಎಸ್.ಎಫ್. ಭೂಸರೆಡ್ಡಿ, ಶ್ರೀ ಜಿ. ಬಿ. ಮನ್ವಾಚಾರ ಅವರಿಗೆ ನನ್ನ ನೆನೆಕೆಗಳು.

ಹಸ್ತಪ್ರತಿಯನ್ನು ಪರಿಶೀಲಿಸಿ ಸೂಕ್ತ ಸಲಹೆಗಳನ್ನಿತ್ತ ಹುಬ್ಬಳ್ಳಿಯ ಚಿಕ್ಕಮಕ್ಕಳ ತಜ್ಞರಾದ ಡಾ॥ ಎಲ್. ಎಲ್. ಕುಲಕರ್ಣಿ ಅವರ ಉಪಕಾರ ಅಪಾರ.

ಮಕ್ಕಳ ರೋಗಗಳ ಬಗೆಗಿನ ಈ ಪುಸ್ತಕವನ್ನು ತಾವು ಓದಿ ಮಕ್ಕಳ ಆರೋಗ್ಯ ರಕ್ಷಣೆಗೆ ಲಕ್ಷ ಕೊಟ್ಟಿದ್ದಾದರೆ ನನ್ನ ಶ್ರಮ ಸಾರ್ಥಕವಾದೀತು !

**ಡಾ. ಆರ್. ಸಿ. ಅಗಡಿ**

# ಪರಿವಿಡಿ

# ಪೀಠಿಕೆ

ಮಕ್ಕಳು ದೇಶದ ಅಮೂಲ್ಯ ಸಂಪತ್ತು. ದೇಶದ ಪ್ರಗತಿಯು ಬಹುಪಾಲು ಮಕ್ಕಳ ಆರೋಗ್ಯವನ್ನೇ ಅವಲಂಬಿಸಿದೆ. ಆರೋಗ್ಯಹೀನ ಮಕ್ಕಳು ಕೇವಲ ಆ ಕುಟುಂಬಕ್ಕಷ್ಟೇ ಭಾರವಲ್ಲ, ಅವರು ಸಮಾಜಕ್ಕೂ ಭಾರವಾಗುವದರಲ್ಲಿ ಸಂದೇಹವಿಲ್ಲ. ಎಲ್ಲ ಸಂಪತ್ತುಗಳಲ್ಲಿ ಆರೋಗ್ಯ ಸಂಪತ್ತೇ ಶ್ರೇಷ್ಠವಾದುದು. ಎಷ್ಟೇ ವಿದ್ಯಾವಂತನಿದ್ದರೂ ಆರೋಗ್ಯವಂತನಾಗಿರದಿದ್ದರೆ ಅದು ನಿಷ್ಪ್ರಯೋಜಕ.

ಅಜ್ಞಾನ, ಅಂಧಕಾರ, ಬಡತನ ಹೆಚ್ಚಾಗಿರುವ ನಮ್ಮ ದೇಶದಲ್ಲಿ ಮಕ್ಕಳನ್ನು ಸಾಂಕ್ರಾಮಿಕ ರೋಗಗಳಿಂದ ರಕ್ಷಿಸುವದು ಹಾಗು ಅವರಿಗೆ ಸತ್ವಯುತ ಆಹಾರ ದೊರೆಯುವಂತೆ ಮಾಡುವದು ಒಂದು ಬೃಹತ್ ಸಾರ್ವಜನಿಕ ಆರೋಗ್ಯ ಸಮಸ್ಯೆಯಾಗಿದೆ.

ಮಕ್ಕಳು ದೇಶಕ್ಕೆ ಎಷ್ಟು ಅವಶ್ಯವೆಂಬುದನ್ನು ಜನತೆಗೆ ತಿಳಿಸಿಕೊಡಲೆಂದೇ ಕಳೆದ ೧೯೭೯ನೇ ವರ್ಷವನ್ನು ಅಂತರ ರಾಷ್ಟ್ರೀಯ ಮಕ್ಕಳ ವರ್ಷವೆಂದು ಇಡೀ ಜಗತ್ತೇ ಮನಗಾಣಲೆಂದು ವಿಶ್ವಸಂಸ್ಥೆಯು (ಯು.ಎನ್..ಓ) ಘೋಷಿಸಿತು.

ಮಕ್ಕಳ ಆರೋಗ್ಯ ರಕ್ಷಣೆಯ ಹೊಣೆ ತಂದೆ ತಾಯಿಗಳೆಲ್ಲರ ಮೇಲೂ ಇದೆ.

೧೯೭೧ರ ಜನಗಣತಿಯ ಪ್ರಕಾರ ನಮ್ಮ ದೇಶದಲ್ಲಿ ಮಕ್ಕಳ ಸಂಖ್ಯೆ ೨೩ ಕೋಟಿ ಇದ್ದು, ಇದು ಸುಮಾರು ಅಮೇರಿಕೆಯ ಒಟ್ಟು ಜನಸಂಖ್ಯೆಯಷ್ಟಿರುತ್ತದೆ. ಭಾರತದ ಜನಸಂಖ್ಯೆಯ ಶೇ. ೪೨ರಷ್ಟು ಮಕ್ಕಳೇ ಇದ್ದಾರೆ. ಪ್ರತಿ ಒಂದೂವರೆ ಸೆಕೆಂಡಿಗೆ ಒಂದು ಮಗು ನಮ್ಮಲ್ಲಿ ಜನಿಸುತ್ತಿದೆ ಎಂದಾಗ, ಎಷ್ಟೊಂದು ಶೀಘ್ರವಾಗಿ ಅವರ ಏಳ್ಗೆಗಾಗಿ ಕಾರ್ಯೋನ್ಮುಖರಾಗಬೇಕೆಂಬುದು ವಿಚಾರಿಸತಕ್ಕ ವಿಷಯವಾಗಿದೆ.

ಕರ್ನಾಟಕವು ಇಡೀ ದೇಶದಲ್ಲಿಯೇ ಅತಿ ಹೆಚ್ಚು ಅಂದರೆ ರಾಜ್ಯದ ಜನಸಂಖ್ಯೆಯ ಶೇ. ೫೮.೪ ರಷ್ಟು ಮಕ್ಕಳನ್ನು ಪಡೆದಿದೆ. ನಮ್ಮ ರಾಜ್ಯದಲ್ಲಿ ಸುಮಾರು ಒಂದೂವರೆ ಲಕ್ಷಕ್ಕೂ ಹೆಚ್ಚು ಮಕ್ಕಳು ಭಿಕ್ಷೆ ಬೇಡಿ ಜೀವಿಸುತ್ತಿದ್ದಾರೆ. ಒಟ್ಟು ೩೦ ಲಕ್ಷಕ್ಕೂ ಹೆಚ್ಚು ಮಕ್ಕಳು ಒಂದಿಲ್ಲ ಒಂದು ತರದ ದೈಹಿಕ ಹಾಗೂ ಬೌದ್ಧಿಕ ನ್ಯೂನತೆಯಿಂದ ಬಳಲುತ್ತಿದ್ದಾರೆ.

ದೇಶದಲ್ಲಿ ಸಂಭವಿಸುವ ಮರಣಗಳಲ್ಲಿ ಶೇ.೪೦ರಷ್ಟು ೫ ವರ್ಷದೊಳಗಿನ ಮಕ್ಕಳಾಗಿದ್ದಾರೆ. ಜನಿಸುವ ಪ್ರತಿ ೧೦೦೦ ಮಕ್ಕಳಲ್ಲಿ ೧೨೨ ಮಕ್ಕಳು ಹುಟ್ಟಿದ ಒಂದು ವರ್ಷದೊಳಗೆ ಮರಣ ಹೊಂದುತ್ತವೆ.

೧

# ಸಸಾರಜನಕ ಕೊರತೆಯಿಂದ ಬರುವ ರೋಗ

ಪೌಷ್ಠಿಕ ಆಹಾರದ ಕೊರತೆಯಿಂದ ಅಸುನೀಗುವ ಮಕ್ಕಳ ಸಂಖ್ಯೆ ಅಪಾರ. ಒಂದು ಅಂದಾಜಿನ ಪ್ರಕಾರ ಪ್ರತಿ ತಿಂಗಳು ಒಂದು ಲಕ್ಷ ಮಕ್ಕಳು ಇದಕ್ಕೆ ಬಲಿಯಾಗುತ್ತಾರೆ. ಭಾರತೀಯ ವೈದ್ಯಕೀಯ ಸಂಶೋಧನೆಯ ವರದಿಯ ಪ್ರಕಾರ ೧ ರಿಂದ ೬ ವರ್ಷಗಳ ಅವಧಿಯಲ್ಲಿರುವ ಶೇ. ೫೦ರಷ್ಟು ಮಕ್ಕಳು ಇದರಿಂದ ತೊಂದರೆಪಡುತ್ತಾರೆ.

ಪೌಷ್ಟಿಕಾಂಶದ ಕೊರತೆಯನ್ನು ನೀಗಿಸಲು ಸತತವಾಗಿ ಪ್ರಯತ್ನಿಸಬೇಕಾಗಿದೆ. ದಟ್ಟ ದಾರಿದ್ರ್ಯದ ಕಾರಣ ಮಕ್ಕಳಿಗೆ ಸತ್ವಯುತ ಆಹಾರ ಸಿಗುತ್ತಿಲ್ಲ. ಇದು ಕೇವಲ ಮಗುವಿನ ದೇಹದ ಮೇಲೆ ಅಷ್ಟೇ ಅಲ್ಲ, ಬುದ್ಧಿಯ ಮೇಲೂ ದುಷ್ಪರಿಣಾಮ ಮಾಡುತ್ತದೆ. ಬಹುತೇಕ ಸಂದರ್ಭಗಳಲ್ಲಿ ಪೋಷಕಾಂಶದ ಕೊರತೆಯು ತಾಯಿಯ ಗರ್ಭದಿಂದಲೇ ಗಂಟುಬಿದ್ದಿರುತ್ತದೆ. ಈ ಪೌಷ್ಠಿಕ ಆಹಾರದ ಅಭಾವದಿಂದ ಬರುವ ಮಕ್ಕಳ ರೋಗಗಳಲ್ಲಿ ಮಾರಕವಾದವುಗಳೆಂದರೆ (ಅ) ಕ್ವಾಷಿಯೋರ್ಕರ ಹಾಗೂ (ಬ) ಮೆರ್ರ್ಯಾಸ್ಮಸ್.

## (ಅ) ಕ್ವಾಷಿಯೋರ್ಕ್ಕರ:

ಈ ರೋಗವು ಮಾನವನ ಉಗಮದೊಂದಿಗೆ ಬಂದಿದ್ದು ಅಂದಿನಿಂದಲೂ ಸಾಮಾಜಿಕ ಪೀಡೆಯೋಪಾದಿಯಲ್ಲಿ ಕಾಡುತ್ತಿದೆ. ಇದರಿಂದಾಗುವ ಮಕ್ಕಳ ಪ್ರಾಣ ಹಾನಿಯನ್ನು ನೋಡಿದರೆ ವಿಜ್ಞಾನವೇ ನಾಚಿಕೆಪಡುವಂತಾಗಿದೆ.

ಶಿಶುವು ಗರ್ಭಾಶಯದಲ್ಲಿ ರೂಪ ತಾಳಿದಂದಿನಿಂದ ಹಿಡಿದು ಕೆಲ ತಿಂಗಳಿನವರೆಗೂ ತಾಯಿಯ ಹಾಲನ್ನೇ ಅವಲಂಬಿಸಿದ್ದು, ಅದರ ಮೇಲೆಯೇ ಮಗುವಿನ ಶಾರೀರಕ ಬೆಳವಣಿಗೆ, ಶಕ್ತಿ, ಹಾಗೂ ಆರೋಗ್ಯ ರಕ್ಷಣೆಯಾಗುವದು. ತಾಯಿಯ ಹಾಲನ್ನು ತೊರೆದು ಮಗು ಆಹಾರ ಸೇವಿಸಬೇಕಾದರೆ ೨ ರಿಂದ ೫ ವರ್ಷದ್ದಾಗಿರುತ್ತದೆ. ಇದೇ ಅವಧಿಯಲ್ಲಿ ಮಕ್ಕಳು ಹೆಚ್ಚಾಗಿ ಈ ರೋಗಗಳಿಗೆ ಬಲಿಯಾಗುತ್ತಾರೆ. ಪೌಷ್ಟಿಕ ಆಹಾರದಲ್ಲಿ ಮುಖ್ಯವಾದ ಘಟಕವೆಂದರೆ ಸಸಾರಜನಕ. ಇದು ಮಗುವಿನ ದೇಹದ ಬೆಳವಣಿಗೆಗೆ ಅತಿ ಅವಶ್ಯವಾದುದು. ಸಾಮಾನ್ಯವಾಗಿ ಇದರ ಕೊರತೆಯಿಂದಲೇ ಕ್ವಾಷಿಯೋರ್ಕ್ಕರ ಬರುವುದು. ಸಸಾರ ಜನಕದೊಂದಿಗೆ ಕೆಲರಿಯ (Calori) ಕೊರತೆಯಾದರೆ ಮೆರ್‍ಯಾಸ್ಮಸ್ ಬರುತ್ತದೆ. ಕಾರಣ ಸಸಾರಜನಕ ಹಾಗು ಕೆಲರಿಯ ಕೊರತೆಯಿಂದಾಗುವ ಮಕ್ಕಳ ಪ್ರಾಣ ಹಾನಿ ಹಾಗೂ ಅವುಗಳಿಂದಾಗುವ ನ್ಯೂನತೆಯನ್ನು ಗಮನಿಸಿದಾಗ ಅವುಗಳ ಮಹತ್ವದ ಅರಿವು ಆಗದಿರದು.

ಆಸ್ಪತ್ರೆ ಸೇರುವ ಸರಾಸರಿ ಶೇ.೨೦ರಷ್ಟು ಮಕ್ಕಳಲ್ಲಿ ಕ್ವಾಷಿಯೋರ್ಕರ ರೋಗಿಗಳಾಗಿರುತ್ತವೆ. ಮಗು ಹುಟ್ಟಿದ ೬ ತಿಂಗಳಿಂದ ೨ ವರ್ಷದೊಳಗೆ ಹೆಚ್ಚಾಗಿ ಇದಕ್ಕೆ ಬಲಿಯಾಗು ತ್ತದೆ. ಸಾಮಾನ್ಯವಾಗಿ ನಮ್ಮ ದೇಶದಲ್ಲಿ ೨ ರಿಂದ ೫ ವರ್ಷ ದೊಳಗಿನ ಮಗುವಿಗೆ ಈ ರೋಗ ಬರುತ್ತದೆ. ಮಗು ತಾಯಿಯ ಹಾಲನ್ನು ಬಿಡುವಾಗ ಆಗಲಿ, ತಾಯಿಯಿಂದ ಬೇರ್ಪ ಟ್ಟಾಗ ಆಗಲಿ, ಸರಿಯಾದ ಪ್ರಮಾಣದಲ್ಲಿ ಹಾಲು ಇಲ್ಲವೆ ಸತ್ವಯುತ ಆಹಾರ ದೊರೆಯದು. ಬಹಳ ದಿನಗಳವರೆಗೆ ಕೆಮ್ಮು ಇದ್ದರೆ, ಭೇದಿ ಹತ್ತಿದರೆ, ಜ್ವರ ಬಂದರೆ ಮಗು ಆಹಾರ ಸೇವಿಸದು. ಹೀಗಾಗಿ ದೇಹದಲ್ಲಿ ಮಗುವಿಗೆ ಬೇಕಾದ ಸಸಾರ ಜನಕ ಇಲ್ಲವಾಗಿ ಬೇಗನೇ ಕ್ವಾಷಿಯೋರ್ಕರ ಅಂಟುತ್ತದೆ. ಸಾವಕಾಶವಾಗಿ ಒಳಗೊಳಗೇ ಬೆಳೆದ ಈ ರೋಗ ಹೊರಗೆ ಕಾಣಲು ಅನೇಕ ತಿಂಗಳುಗಳು ಬೇಕಾಗಬಹುದು.

ಸಹಜವಾಗಿರತಕ್ಕ ಮಗುವಿನ ಮುಖ ಉಬ್ಬಿ ನಂತರ ದೇಹದ ಎಲ್ಲ ಭಾಗವು ದುಂಡಾಗಿ ದಪ್ಪಗಾದಾಗ ತಂದೆ–ತಾಯಿ ಗಳು ನಮ್ಮ ಮಗು ಎಷ್ಟು ಆರೋಗ್ಯವಂತನಾಗಿ ಮುದ್ದಾಗಿ ಕಾಣುವದಲ್ಲಾ ಎಂದು ಸಂತೋಷಪಡುವುದುಂಟು. ಆದರೆ ಮೈ ಬಾವು ಹೆಚ್ಚಾಗುತ್ತಾ ನಡೆದಾಗ ವೈದ್ಯರಲ್ಲಿ ಹೋದಾಗ ಮೈಬಾವು ಬರುವುದು ಒಂದು ಅಪಾಯಕಾರಿ ರೋಗದ ಲಕ್ಷಣ ವೆಂದು ಅವರು ತಿಳಿದಾಗ ತಂದೆ ತಾಯಿಗಳಿಗಾಗುವ ವ್ಯಥೆ ವರ್ಣನಾತೀತ.

ಕ್ವಾಷಿಯೋರ್ಕರದ ತೊಂದರೆಯು ಮಗು ಮಾನಸಿಕ ಅಸ್ವಸ್ಥತೆ, ನಿರುತ್ಸಾಹ, ಚಟುವಟಿಕೆಹೀನವಾಗಿ ಒಂದೆಡೆ ತಾನೇ ಸುಮ್ಮನೆ ಮಲಗುವುದು. ಇಲ್ಲವೆ ಸಪ್ಪೆಯಾದ ಕಳೆಹೀನ ಮುಖದಿಂದ ಕೂಡುವದು. ಏನಾದರೂ ತಿನ್ನಲು ಕೊಟ್ಟರೂ ಆಸ್ಥೆ ತೋರಿಸದು. ಮಗುವು ನೋಡಲಿಕ್ಕೆ ದಪ್ಪವಾಗಿ ಕಂಡರೂ ಕೂಡಾ ತೂಕದಲ್ಲಿ ಕಡಿಮೆ ಆಗಿರುತ್ತದೆ. ಬೆಳವಣಿಗೆ ಕುಂಠಿತ ವಾಗಿರುತ್ತದೆ.

**ರೋಗದ ಲಕ್ಷಣಗಳು :**

**ಮಗುವಿಗೆ ಭೇದಿ ಹತ್ತುವುದು :** ಕ್ವಾಷಿಯೋರ್ಕರ ರೋಗದ ಮುಖ್ಯ ಲಕ್ಷಣವೆಂದರೆ ಮಗುವಿಗೆ ಭೇದಿ ಹತ್ತುವದು. ಮೊದಮೊದಲು ಹಾಲು ಕುಡಿದೊಡನೆ, ಆಹಾರ ಸೇವಿಸಿದೊಡನೆ ಭೇದಿಯಾಗುತ್ತದೆ. ಮೊದಲ ದಿನ ೨–೩ ಸಲ ನೀರಿನ ಭೇದಿ ಯಾದರೆ ನಂತರದ ದಿನಗಳಲ್ಲಿ ಸ್ವಲ್ಪ ಗಟ್ಟಿಯಾದ ಭೇದಿ ಯಾಗುತ್ತದೆ.

**ಚರ್ಮದ ಬದಲಾವಣೆ:** ರೋಗಪೀಡಿತ ಮಗುವಿನ ಚರ್ಮದ ಬದಲಾವಣೆಯು ವಿಶಿಷ್ಟವಾಗಿದ್ದು ಅಲ್ಲಲ್ಲಿ ಮೈಬಣ್ಣ ಮಾಸಿದ ಬಿಳಿಗೋಡೆಯಂತೆ ಕಾಣುತ್ತದೆ. ಮೊಳಕೈ ಮೊಳ ಕಾಲಿನ ಹಾಗು ಭುಜ, ಎಲುಬಿನ ಮೇಲಿನ ಚರ್ಮ ಒಣಗಿ ಸುಲಿ ಯುತ್ತದೆ. ಚರ್ಮವು ಕಾಂತಿಹೀನವಾಗಿದ್ದು, ಅಲ್ಲಲ್ಲಿ ರಕ್ತ ಸ್ರಾವದ ಸಣ್ಣ ಸಣ್ಣ ಕೆಂಪು ಕಲೆಗಳು ಕಾಣುತ್ತವೆ. ಸಸಾರ ಜನಕದ ಕೊರತೆಯೊಂದಿಗೆ "ಬಿ" ಜೀವಸತ್ವದ ಕೊರತೆಯಾದರೆ ಬಾಯಲ್ಲಿ ಹುಣ್ಣುಗಳು, 'ಎ' ಜೀವಸತ್ವದ ಕೊರತೆಯಿಂದ ಮಗುವಿಗೆ ರಾತ್ರಿ ಕಣ್ಣುಗಳು ಕಾಣದಾಗುತ್ತವೆ.

**ಕೂದಲಿನ ಬದಲಾವಣೆ:** ಆರೋಗ್ಯವಂತ ಮಕ್ಕಳ ಕೂದಲು ಕಪ್ಪಾಗಿದ್ದರೆ ಕ್ವಾಷಿಯೋರ್ಕರದ ಮಗುವಿನ ಕೂದಲು ಕೆಂಪು ಇಲ್ಲವೆ ಬೂದು ಬಣ್ಣವಾಗಿರುತ್ತದೆ. ತಾವಾಗಿಯೇ ಕೂದಲುಗಳು ಉದುರುತ್ತವೆ; ಇಲ್ಲವೆ ಸ್ವಲ್ಪ ಹಿಡಿದೆಳೆದರೂ ಕಿತ್ತು ಬರುತ್ತವೆ. ಹೀಗಾಗಿ ಮಗುವಿನ ತಲೆ ಬೋಳು ಆಗಿರುತ್ತದೆ.

**ಯಕೃತ್‌ದ ಬದಲಾವಣೆ:** ಸಾಮಾನ್ಯವಾಗಿರುವದಕ್ಕಿಂತಲೂ ಹೊಟ್ಟೆಯೊಳಗಿನ ಯಕೃತ್ ದೊಡ್ಡದಾಗಿರುತ್ತದೆ. ಹೊಟ್ಟೆಯನ್ನು ಅದುಮಿದರೆ ಕೈಗೆ ಹತ್ತುತ್ತದೆ. ಸಾಮಾನ್ಯವಾಗಿ ಈ ರೋಗದ ಮೂಲ ಬಡತನವೇ ಆಗಿದ್ದು, ಒಡ ಕೂಲಿಕಾರರ ಮಕ್ಕಳಲ್ಲಿ ಕೊಳಚೆ ನಿವಾಸಿಗಳ ಮಕ್ಕಳಲ್ಲಿ, ಭಿಕ್ಷುಕರ ಮಕ್ಕಳಲ್ಲಿ ಇದರ ಪ್ರಮಾಣ ಹೆಚ್ಚು ಇರುತ್ತದೆ.

**ರೋಗದಿಂದಾಗುವ ತೊಡಕುಗಳು :**

ಮಗು ಕ್ವಾಷಿಯೋರ್ಕರ ರೋಗಕ್ಕೆ ಗುರಿಯಾದರೆ ಶರೀರದ ರೋಗ ಪ್ರತಿಬಂಧಕ ಶಕ್ತಿ ಕಡಿಮೆ ಆಗಿ ಕೆಮ್ಮು, ಜ್ವರ, ವಾಂತಿ, ಭೇದಿ, ಆಮಶಂಕೆ, ಕ್ಷಯ, ರಕ್ತಹೀನತೆಯಂತಹ ರೋಗಗಳು ಬೇಗನೆ ಅಂಟುತ್ತವೆ.

**ಪ್ರತಿಬಂಧಕೋಪಾಯಗಳು:**

ಅಪಾಯಕಾರಿಯಾದ ಈ ರೋಗ ಬಂದ ನಂತರ ಉಪಚರಿಸುವುದಕ್ಕಿಂತಲೂ ರೋಗ ಬರದಂತೆ ಪ್ರತಿಬಂಧಿಸುವದು ಸುಲಭ ವಿಧಾನವಾಗಿದೆ. ಮಕ್ಕಳಿಗೆ ಸಸಾರಜನಕ ಯುಕ್ತ ಆಹಾರಗಳಾದ ಶೇಂಗಾ, ಕಡಲೆ, ತೊಗರಿಬೇಳೆ, ಕಾಸಿ ಕೆನೆ ತೆಗೆದ

ಹಾಲು, ಮೀನು, ಮಾಂಸ, ತತ್ತಿ, ಹಣ್ಣುಹಂಪಲು, ಕಾಯಿಪಲ್ಲೆ, ಅನ್ನ, ಮೊಸರು, ಬ್ರೆಡ್, ಬೆಣ್ಣೆ ಮುಂತಾದುವನ್ನು ತಿನ್ನಿಸ ಬೇಕು. ಇವುಗಳೊಂದಿಗೆ ಪೇಟೆಯಲ್ಲಿ ದೊರೆಯುವ ಮಕ್ಕಳ ಆಹಾರ, ಹಾಲಿನ ಪುಡಿಗಳನ್ನು ಕೊಡಬೇಕು. ಮಗುವಿಗೆ ಭೇದಿ, ರಕ್ತಹೀನತೆ, ರಾತ್ರಿ ಕಣ್ಣು ಕಾಣದಿರುವದಕ್ಕೆ ವೈದ್ಯರಲ್ಲಿ ತೋರಿಸಬೇಕು.

**ತಾಯಂದಿರಿಗೆ ಸಲಹೆಗಳು :**

೧. ತಾಯಂದಿರು ತಮ್ಮ ಮಕ್ಕಳಿಗೆ ಕನಿಷ್ಠ ೬ ತಿಂಗಳಾದರೂ ಮೊಲೆಹಾಲು ಕುಡಿಸಬೇಕು.

೨. ಮೊಲೆಹಾಲು ಕಡಿಮೆ ಆದರೆ ಹಣ್ಣಿನ ರಸ, ಗಂಜಿ, ಹಾಲು, ಬೇಯಿಸಿದ ಬೇಳೆ, ಮುಂತಾದವುಗಳನ್ನು ಕೊಡಬಹುದು.

**(ಬ) ಮೆರ್ಯಾಸ್ಮಸ್ :**

ಪೌಷ್ಟಿಕ ಆಹಾರದ ಕೊರತೆಯಿಂದ ಬರುವ ಮಕ್ಕಳ ರೋಗಗಳಲ್ಲಿ ಇನ್ನೊಂದು ಮಾರಕವಾದ ರೋಗ ಮೆರ್ಯಾಸ್ಮಸ್. ಕ್ವಾಷಿಯೋರ್ಕರದಲ್ಲಿ ಸಸಾರಜನಕದ ಕೊರತೆಯಿದ್ದರೆ ಮೆರ್ಯಾಸ್ಮಸ್‌ದಲ್ಲಿ ಸಸಾರಜನಕ ಹಾಗೂ ಕೆಲರಿಯಂಶ ಎರಡರ ಕೊರತೆ ಇರುತ್ತದೆ.

ಕ್ವಾಷಿಯೋರ್ಕರ ರೋಗಕ್ಕೆ ಕಾರಣವಾದ ಮಗುವಿಗೆ ಅವಶ್ಯವಿದ್ದಷ್ಟು ತಾಯಿಯ ಅಥವಾ ಹಸುವಿನ ಹಾಲು ದೊರೆಯದೇ ಇರುವದು; ತಾಯಿಯಿಂದ ಮಗು ಬೇರ್ಪಟ್ಟರೆ, ಮಗುವಿಗೆ ವಾಂತಿ ಭೇದಿ ಹತ್ತಿದರೆ, ಮಗುವಿಗೆ ಸತ್ವಯುತ ಆಹಾರ ದೊರೆಯದೇ ಹೋದರೆ ಮೆರ್ಯಾಸ್ಮಸ್ ಬರುತ್ತದೆ.

ಕ್ವಾಷಿಯೋರ್ಕರ ರೋಗದ ಮಗುವು ಮೈ ಕೈ ತುಂಬಾ ಬಾವು ಬಂದರೆ ಅದಕ್ಕೆ ತದ್ವಿರುದ್ಧವಾಗಿ ಮೆರ್ರ್ಯಾಸ್ಮಸ್ ರೋಗ ಪೀಡಿತ ಮಗು ಸೊರಗಿ ಸಣ್ಣಾಗಿರುತ್ತದೆ. ಮಗುವಿನ ಎಲುಬು ಗಳ ಮೇಲೆ ಕೇವಲ ಚರ್ಮದ ಹೊದಿಕೆ ಮಾತ್ರ ಇರುತ್ತದೆ. ಕಣ್ಣುಗುಡ್ಡೆ, ಕಪಾಳ ಒಳ ಸೇರಿ ನೋಡುವವರಿಗೆ ಮಗುವಿನ ಮುಖವು 'ಮಂಗನ ಮುಖ'ದಂತೆ ಕಾಣುತ್ತದೆ. ಇಂಥ ಮಕ್ಕ ಳಿಗೆ 'ಬಾಲವೃದ್ಧ'ರೆನ್ನಬಹುದು. ಮಗುವಿನ ತೂಕವು ಮೊದಲಿನ ಅರ್ಧದಷ್ಟು ಕೂಡಾ ಇರುವುದಿಲ್ಲ. ಮಗುವು ಕಳೆಹೀನವಾಗಿ ನಿಶಕ್ತಿಯಿಂದ ಆಗಾಗ್ಗೆ ಅಳುವುದು, ಕಿರಿಕಿರಿ ಮಾಡುತ್ತದೆ. ರೋಗವು ಉಲ್ಬಣಗೊಂಡಾಗಂತೂ ಅಳಲೂ ಕೂಡ ಶಕ್ತಿ ಇಲ್ಲ ವಾಗುತ್ತದೆ. ಆ ಮಗುವಿನ ಅರಿವೆ ತೆಗೆದರೆ ಜೋಡಿಸಿಟ್ಟ ಎಲುಬಿನ ಹಂದರದ ಹಾಗೆ ಕಾಣುತ್ತದೆ.

ಮೆರ್ರ್ಯಾಸ್ಮಸ್, ಹಾಗು ಕ್ವಾಷಿಯೋರ್ಕರ ಕೂಡಿಯೇ ಬರ ಬಹುದು. ಆಗ ತಲೆ ಕೂದಲು ಕಂದು ಬಣ್ಣವಾಗಿಯೂ, ಚರ್ಮವು ಬಿರಿದು ಮುಖ ಕೈಕಾಲುಗಳಿಗೆ ಸ್ವಲ್ಪ ಬಾವು ಬಂದಿರು ತ್ತದೆ.

**ಪ್ರತಿಬಂಧಕೋಪಾಯ :**

ಮಗುವಿಗೆ ಹೆಚ್ಚು ಹಾಲಿನ ಅವಶ್ಯಕತೆಯಿದ್ದು, ಹಾಲಿ ನೊಂದಿಗೆ ರಾಗಿ, ಅನ್ನದ ಗಂಜಿ ಬೆರೆಸುವುದು ಉತ್ತಮ. ಗೋದಿ ಆಹಾರ, ತತ್ತಿ, ಬೆಣ್ಣೆ, ಹಣ್ಣುಗಳನ್ನು ಸಾಕಷ್ಟು ಕೊಡ ಬೇಕು. ಕ್ಷಯ. ಯಕೃತ, ಮೂತ್ರಪಿಂಡದ ರೋಗಗಳಿದ್ದರೆ ವೈದ್ಯರ ಸಲಹೆ ಪಡೆಯಬೇಕು. ಕ್ವಾಷಿಯೋರ್ಕರದ ಪ್ರತಿ ಬಂಧಕ ವಿಧಾನಗಳನ್ನೇ ಇದರಲ್ಲೂ ಅನುಸರಿಸಬೇಕು.

೨

# ಮಕ್ಕಳ "ಲಕ್ವ" ಕಾಯಿಲೆ-ಪೋಲಿಯೋ

ವೈದ್ಯ ವಿಜ್ಞಾನವು ಈಗಾಗಲೇ ಮಕ್ಕಳ ಪ್ರಾಣಾಪಾಯ ಕಾರಿ ರೋಗಗಳಾದ ಪ್ಲೇಗು, ಮೈಲಿಬೇನೆ, ಕಾಲರಾ ಮುಂತಾದ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ಸಫಲವಾಗಿದ್ದರೂ ಮಕ್ಕಳ ಜೀವನದುದ್ದಕ್ಕೂ ಬಾಳನ್ನೇ ಗೋಳು ಮಾಡುವ ರೋಗ ಪೋಲಿಯೋ ಮಾತ್ರ, ಇನ್ನೂ ದೇಶದ ಎಲ್ಲೆಡೆಯೂ ಕಂಡುಬರುತ್ತಿರುವದು ನಮ್ಮ ಮಕ್ಕಳ ದುರದೃಷ್ಟವೇ ಸರಿ!

ಜನಸಾಮಾನ್ಯರಲ್ಲಿ ಈ ರೋಗದ ಬಗೆಗೆ ಸೂಕ್ತ ತಿಳು ವಳಿಕೆ ಮೂಡಿದರೆ ಇದನ್ನು ಕೂಡಾ ಸಂಪೂರ್ಣವಾಗಿ ನಿರ್ನಾಮ ಮಾಡುವದು ಸಾಧ್ಯವಿದೆ.

ಪೋಲಿಯೋ ಪೀಡಿತ ಮಗು ಕೇವಲ ಆ ಮನೆಗೆ ಅಷ್ಟೇ ಭಾರವಲ್ಲ, ಅದು ಸಮಾಜಕ್ಕೂ ಭಾರ. ಪೋಲಿಯೋ ರೋಗ ವನ್ನು "ಮಕ್ಕಳ ಪಾರ್ಶ್ವ" ಅಥವಾ "ಮಕ್ಕಳ ಅರನಾರಿ" (ಲಕ್ವ) ಎಂತಲೂ ಕರೆಯುವರು.

ಸಾಮಾನ್ಯವಾಗಿ ಹುಟ್ಟಿದ ೬ ತಿಂಗಳೊಳಗೆ ಈ ರೋಗ ಬರುವದು ವಿರಳ. ಅದರಂತೆ ಮಗುವು ೩ ವರ್ಷದ್ದಾದರೆ ಅದರ ಪ್ರಮಾಣವು ಕಡಿಮೆ. ಮಗುವಿಗೆ ಅಪಾಯದ ವಯಸ್ಸೆಂದರೆ ೬ ತಿಂಗಳಿಂದ ೩ ವರ್ಷಗಳವರೆಗೆ.

ಮಗುವಿಗೆ ರೋಗ ಬಂದು ಸಂಪೂರ್ಣವಾಗಿ ಗುಣವಾಗಲೂಬಹುದು; ಇಲ್ಲವೆ ಒಂದು ಕಾಲಿಗೆ ಅಥವಾ ಎರಡೂ ಕಾಲಿಗೆ ಶಾಶ್ವತ ಊನ ಉಂಟಾಗಬಹುದು ಅಥವಾ ಭಾಗಶಃ ಊನ ಆಗಬಹುದು.

ಪೋಲಿಯೋ ರೋಗಪೀಡಿತ ಮಗುವಿನ ಭವಿಷ್ಯವೇ ಅನಿಶ್ಚಿತವಿದ್ದು ಕೊನೆಯವರೆಗೂ ಅವರು ಪರಾವಲಂಬಿಗಳಾಗಿ ಜೀವಿಸಬೇಕಾಗಬಹುದು.

## ರೋಗಕ್ಕೆ ಕಾರಣ :

ಪೋಲಿಯೋ ರೋಗಕ್ಕೆ ಸೂಕ್ಷ್ಮವಾದ ವಿಷಾಣುಗಳು (ವೈರಸ್) ಕಾರಣವಾಗಿದ್ದು, ಇವು ಮಗುವಿನ ಬೆನ್ನುಹುರಿ ಹಾಗೂ ಮೆದುಳಿಗೆ ಅಂಟಿ ರೋಗವನ್ನುಂಟು ಮಾಡುತ್ತವೆ. ಆಗ ಮಗುವಿನ ಕೈಕಾಲುಗಳ ಮಾಂಸಖಂಡಗಳಲ್ಲಿ ಶಕ್ತಿ ಇಲ್ಲದಾಗುತ್ತದೆ. ಸಾಮಾನ್ಯವಾಗಿ ಪೋಲಿಯೋ ರೋಗ ಬರುವ ತಿಂಗಳುಗಳೆಂದರೆ ಬೇಸಿಗೆಯ ಕೊನೆಯ ಹಾಗೂ ಮಳೆಗಾಲದ ಆರಂಭಕ್ಕೆ, ಹೀಗಾಗಿ ಜುಲೈನಿಂದ ನವಂಬರಕ್ಕೆ ಇದರ ಪ್ರಮಾಣ ಪರಾಕಾಷ್ಠೆಗೆ ತಲುಪಿರುತ್ತದೆ.

## ರೋಗ ಪ್ರಸಾರವಾಗುವ ಬಗೆ

ವಾತಾವರಣ ಹೊಲಸಾದಾಗ, ಮಕ್ಕಳಲ್ಲಿ ನೆಗಡಿ ಕೆಮ್ಮಿನ ಪ್ರಮಾಣ ಹೆಚ್ಚಾದಾಗ, ನೊಣಗಳ ಹಾವಳಿ ಹೆಚ್ಚಾದಾಗ ಪೋಲಿಯೋದ ಪ್ರಮಾಣವು ಹೆಚ್ಚು. ಜನವಸತಿ ನಿಬಿಡವಾಗಿರುವ ಪ್ರದೇಶಗಳಲ್ಲಂತೂ ವರ್ಷದ ಎಲ್ಲಾ ದಿನಗಳಲ್ಲಿ ಈ ರೋಗ ಇರುತ್ತದೆ.

ರೋಗಿಯು ಕೆಮ್ಮಿದಾಗ, ಸೀನಿದಾಗ, ಆಕಳಿಸಿದಾಗ, ಉಗುಳಿದಾಗ ರೋಗಾಣುಗಳು ಸಣ್ಣ ಹನಿಗಳ ರೂಪದಲ್ಲಿ ವಾತಾವರಣವನ್ನು ಸೇರಿದಾಗ ಅಂಥ ಹವೆಯನ್ನು ನಿರೋಗಿ ಮಕ್ಕಳು ಸೇವಿಸಿದರೆ ಹಾಗೂ ರೋಗಿಯು ಉಪಯೋಗಿಸಿದ ಪಾತ್ರೆ, ಅರಿವೆ, ಆಟಿಗೆಯ ವಸ್ತುಗಳಿಂದ ರೋಗ ಇನ್ನೊಬ್ಬರಿಗೆ ಹರಡುತ್ತದೆ.

ರೋಗಿಯ ಮಲವನ್ನು ತೋಟಪಟ್ಟಿಗಳಿಗೆ ಗೊಬ್ಬರ ರೂಪದಲ್ಲಿ ಹಾಕಿದಾಗ ಅಲ್ಲಿ ಬೆಳೆಯುವ ಕಾಯಿಪಲ್ಲೆ, ಗಡ್ಡೆ ಗೆಣಸುಗಳಿಗೆ ರೋಗಾಣು ಹತ್ತಿದರೆ, ಇಲ್ಲವೆ ರೋಗಾಣು ಮಿಶ್ರಿತ ನೀರನ್ನು, ಹಾಲನ್ನು ಸೇವಿಸುವುದರಿಂದಲೂ ರೋಗ ಹರಡುತ್ತದೆ. ಆದ್ದರಿಂದ ಮಕ್ಕಳನ್ನು ಕೆರೆ, ಹಳ್ಳ, ಹೊಳೆ, ಬಾವಿಯ ಹತ್ತಿರ ಮಲವಿಸರ್ಜನೆಗೆ ಕೂಡ್ರಿಸಬಾರದು.

ರೋಗ ಪ್ರಸಾರದಲ್ಲಿ ನೊಣಗಳು ಮಹತ್ತರ ಪಾತ್ರ ವನ್ನು ವಹಿಸುತ್ತವೆ ನೊಣಗಳ ಬಗೆಗೆ ಸೂಕ್ತ ಎಚ್ಚರಿಕೆ ವಹಿಸುವುದು ಉತ್ತಮ.

ಒಟ್ಟಿನಲ್ಲಿ ಹೇಳುವುದಾದರೆ ಹೊಲಸು ವಾತಾವರಣ ಹೆಚ್ಚು ಜನಸಾಂದ್ರತೆ ಇರುವ ಪ ದೇಶಗಳಲ್ಲಿ ಮಕ್ಕಳಿಗೆ ರೋಗ ಪ್ರತಿಬಂಧಕ ಔಷಧಿ ಹಾಕಿಸದ ಪ್ರಸಂಗಗಳಲ್ಲಿ ರೋಗದ ಪ್ರಮಾಣ ಹೆಚ್ಚು ಇರುತ್ತದೆ.

ಗರ್ಭಿಣಿಯರಿಗೆ ರೋಗ ತಗುಲಿದರೆ ಗರ್ಭಾಶಯದ ಶಿಶುವಿಗೂ ಸೋಂಕು ತಟ್ಟಿ ಅದಕ್ಕೂ ರೋಗ ಬರುತ್ತದೆ.

**ರೋಗ ಅಂಟಲು ಕಾರಣ :**

ರೋಗ ಅಂಟಲು ಹಲವಾರು ಕಾರಣಗಳಿದ್ದು ಅವುಗಳಲ್ಲಿ ಮಗುವಿಗೆ ಭೇದಿ ಹತ್ತುವದು. ಮಗು ಗಂಟಲು ಬೇನೆಯಿಂದ ಬಳಲುತ್ತಿದ್ದರೆ ಮಗುವಿಗೆ ಶಸ್ತ್ರಕ್ರಿಯೆ, ಚುಚ್ಚುಮದ್ದು ಇಲ್ಲವೆ ಯಾವುದೇ ಪೆಟ್ಟಿನಿಂದ ಗಾಯಗಳಾದರೂ ಅವುಗಳ ಮೂಲಕ ರೋಗಾಣುಗಳು ದೇಹ ಸೇರಿ ರೋಗ ಅಂಟುತ್ತದೆ.

ಪೋಲಿಯೋ ವಿಷಾಣು ದೇಹವನ್ನು ಗಂಟಲು ಹಾಗೂ ಕರುಳಿನ ಮೂಲಕ ಸೇರಿ ನಂತರ ದುಗ್ಧರಸನಾಳಗಳ ಮೂಲಕ ರಕ್ತ ಸೇರಿ ನರಮಂಡಲ ಪ್ರವೇಶಿಸಿ ರೋಗ ಉಂಟಾಗುತ್ತದೆ.

ಮೈಮೇಲೆ ಗಾಯಗಳಾದಾಗ ನರತಂತುಗಳ ಸಂಪರ್ಕ ರೋಗಾಣುಗಳಿಗೆ ಬಂದರೆ ನೇರವಾಗಿ ರೋಗಾಣುಗಳು ನರ ಮಂಡಲ ಸೇರುತ್ತವೆ. ಕಾರಣ ಮಗುವಿಗೆ ಗಾಯಗಳಾದರೆ, ಗಂಟಲು ಹಾಗೂ ಟಾನ್ಸಿಲ್ ತೊಂದರೆ ಯಾದರೆ ವೈದ್ಯರ ಸಲಹೆ ಪಡೆಯುವದು ಅವಶ್ಯ.

ಸಾಮಾನ್ಯವಾಗಿ ರೋಗಾಣು ದೇಹವನ್ನು ಸೇರಿದ ೧೦ ದಿನಗಳ ನಂತರ ರೋಗದ ಲಕ್ಷಣಗಳು ಕಂಡುಬರುತ್ತವೆ. ರೋಗ ಪ್ರಾರಂಭಗೊಂಡಾಗ ಸ್ವಲ್ಪ ಮೈಕೈ ನೋವು, ತಲೆನೋವು, ನೆಗಡಿ, ವಾಂತಿ, ವಾಕರಿಕೆ, ಗಂಟಲು ನೋವು ಆಗಿ ಮಗು ಆಹಾರ ಸೇವಿಸದೇ ಇರಬಹುದು. ಈ ಹಂತದಲ್ಲಿ ಸೂಕ್ತ ಉಪಚಾರ ಸಿಕ್ಕರೆ ಮುಂದಿನ ಹಂತವನ್ನು ತಡೆಗಟ್ಟುವುದು ಸುಲಭಸಾಧ್ಯವಿದ್ದರೂ ಹೆಚ್ಚಾಗಿ ವೈದ್ಯರು ಕೂಡಾ ಇದು ಫ್ಲೂ ಇರಬಹುದೆಂದು ನಿರ್ಲಕ್ಷಿಸುವುದುಂಟು.

ರೋಗವು ಮುಂದುವರಿದಂತೆ, ತಲೆನೋವು ಜಾಸ್ತಿಯಾಗಿ ಜ್ವರವು ೧೦೨ ರಿಂದ ೧೦೪* ಫಾ.ಗೆ ಏರುತ್ತದೆ. ವಾಂತಿಯು ವಿಪರೀತವಾಗಿ ಕುತ್ತಿಗೆ, ಬೆನ್ನು, ಕೈಕಾಲುಗಳ ಸ್ನಾಯುಗಳಲ್ಲಿ ನೋವು ಬಂದು ಸೆಟೆಯುತ್ತವೆ. ಬೆನ್ನು ಬಾಗಿದಂತಾಗುತ್ತದೆ. ಮೂತ್ರವಿಸರ್ಜನೆ ಹತೋಟಿಯಲ್ಲಿರದು. ಮಲಬದ್ಧತೆ ಸಾಮಾನ್ಯ ವಾದ ಲಕ್ಷಣ. ಈ ಹಂತದಲ್ಲಿಯೂ ಉಪಚಾರಸಿಕ್ಕರೆ ರೋಗವು ಗುಣವಾಗಬಹುದು.

ರೋಗವು ಕೊನೆಯ ಹಂತ ತಲುಪಿದಾಗ ಸ್ವಲ್ಪೇ ಚಲನ ವಲನಕ್ಕೂ ಸ್ನಾಯುಗಳಲ್ಲಿ ನೋವು ಹೆಚ್ಚಾಗಿ ಶಕ್ತಿ ಇಲ್ಲವಾಗು ತ್ತದೆ. ಕೊನೆಗಂತೂ ಪಾರ್ಶ್ವವಾಯು ಹೊಡೆಯುತ್ತದೆ.

ಹೊಟ್ಟೆ, ಎದೆ, ಕುತ್ತಿಗೆ, ಕಣ್ಣಿನ ಸ್ನಾಯುಗಳಿಗೂ ಪಾರ್ಶ್ವ ವಾಯು ಹೊಡೆಯಬಹುದು. ಉಸಿರಾಟದ ಹಾಗೂ ಹೃದ ಯದ ಸ್ನಾಯುಗಳಿಗೆ ಪಾರ್ಶ್ವವಾಯು ಹೊಡೆದರೆ ರೋಗಿಯು ಮರಣಹೊಂದುತ್ತಾನೆ.

ಮೊದಲ ಹಂತದಲ್ಲಿ ರೋಗ ಗುರುತಿಸಿದರೆ ತಕ್ಕ ಚಿಕಿತ್ಸೆ ನೀಡಿದಲ್ಲಿ ಗುಣವಾಗುವ ಸಾಧ್ಯತೆಯಿರುತ್ತದೆ. ಆದರೆ ಮೊದಲ ಹಂತದಲ್ಲಿ ರೋಗವನ್ನು ಗುರುತಿಸುವುದೇ ಕಠಿಣವಾಗಿದ್ದು ಒಂದು ಅಂಗ ಊನವಾದಾಗ ಮಾತ್ರ ರೋಗ ನಿದಾನವಾಗು ತ್ತದೆ. (Diagnosis) ಆಗ ಚಿಕಿತ್ಸೆಯು ನಿರುಪಯುಕ್ತ ವಾದ ಕಾರಣ ರೋಗ ಬರದಂತೆ ಎಚ್ಚರಿಕೆ ವಹಿಸುವುದೇ ಸೂಕ್ತ ವಾದುದು.

ಪೋಲಿಯೋ ರೋಗಕ್ಕೆ ಪರಿಣಾಮಕಾರಿಯಾದ ಔಷಧಿಗಳು ಲಭ್ಯವಿಲ್ಲ. ಜ್ವರ, ತಲೆನೋವು, ಮೈಕೈ ನೋವನ್ನು ಮಾತ್ರ ಔಷಧಿಯಿಂದ ಕಡಿಮೆ ಮಾಡಬಹುದು. ಏನೇ ಆಗಲಿ ರೋಗದ ಸಂಶಯು ಕಂಡುಬಂದೊಡನೆ ಮಗುವನ್ನು ಆಸ್ಪತ್ರೆಗೆ ಸೇರಿಸುವದು ಉತ್ತಮ.

**ಪ್ರತಿಬಂಧಕೋಪಾಯುಗಳು :**

ಪೋಲಿಯೋ ರೋಗವನ್ನು ಸಂಪೂರ್ಣವಾಗಿ ಪ್ರತಿಬಂಧಿಸಲು "ಲಸಿಕೆ" ಹಾಕುವ ವಿಧಾನವು ಯೋಗ್ಯವಾಗಿದ್ದು, ಮಗು ಜನಿಸಿದ ೩ನೇ ತಿಂಗಳಿಂದಲೇ ೩ ಸಲ ಬಾಯಿ ಮೂಲಕ ಲಸಿಕೆ ಹಾಕಲಾಗುವುದು. ಇದಾದ ಒಂದು ಹಾಗೂ ಮೂರು ವರ್ಷಗಳ ನಂತರ ವರ್ಧಕಪ್ರಮಾಣ (ಬೂಸ್ಟ್‌ಡೋಜ್) ವನ್ನು ಒಂದು ಸಲ ಹಾಕಲಾಗುವುದು. ಈ ಲಸಿಕೆಯಿಂದ ಮಗುವಿಗೆ ಕೊನೆಯುವರೆಗೂ ರೋಗದ ವಿರುದ್ಧ ರಕ್ಷಣೆ ದೊರೆಯುತ್ತದೆ.

**ಲಸಿಕೆ ಹಾಕುವಾಗ ಪಾಲಕರು ಗಮನಿಸಬೇಕಾದ ಸಂಗತಿಗಳು :**

೧. ಮಗುವು ವಾಂತಿ, ಭೇದಿಯಿಂದ ಬಳಲುತ್ತಿರಬಾರದು

೨. ಮಗುವಿಗೆ ಕೆಮ್ಮು, ಜ್ವರ ಇರಬಾರದು.

೩. ಮಗುವಿಗೆ ಲಸಿಕೆ ಹಾಕಿಸುವ ಪೂರ್ವದಲ್ಲಿ ಹಾಗು ನಂತರ ಒಂದು ತಾಸು ತಾಯಿಯು ಹಾಲನ್ನು ಕುಡಿಸಬಾರದು; ತಾಯಿಯ ಹಾಲಿನಲ್ಲಿರತಕ್ಕ ಪ್ರತಿರೋಧ ವಸ್ತುವಿನಿಂದ (ಆ್ಯಂಟಿಬಾಡಿ) ಲಸಿಕೆಯ ಶಕ್ತಿಹೀನವಾಗುತ್ತದೆ.

# ಡಿಫ್ತೀರಿಯಾ (ಗಂಟಲು ಬೇನೆ)

ಮಕ್ಕಳ ರೋಗಗಳಲ್ಲಿಯೇ ಅಪಾಯಕಾರಿಯಾದ ಸಾಂಕ್ರಾಮಿಕ ರೋಗ ಇದಾಗಿದೆ. ಸಾಮಾನ್ಯವಾಗಿ ಜನನಿಬಿಡ ಪ್ರದೇಶದಲ್ಲಿ ಶೀತ ಹವಾಮಾನದಲ್ಲಿ ಇದರ ಉಪಟಳ ಹೆಚ್ಚು. ೨ ರಿಂದ ೫ ವರ್ಷದ ಮಕ್ಕಳಲ್ಲಿ ಈ ರೋಗದ ಪ್ರಮಾಣ ಹೆಚ್ಚೆಂದು ಹೇಳಬಹುದು.

ಶಾಲೆಯ ಮಕ್ಕಳಲ್ಲಿ, ಚಿಕ್ಕ ಮಕ್ಕಳಿರುವ ವಸತಿ ಗೃಹಗಳಲ್ಲಿ ಈ ರೋಗ ಹರಡುವ ಸಂಭವ ಹೆಚ್ಚು.

**ರೋಗಕ್ಕೆ ಕಾರಣ :**

ಕಾರ್ನಿಬೇಕ್ಟೇರಿಯಂ ಡಿಫ್ತೀರಿಯಾ ಎಂಬ ರೋಗಾಣುಗಳ ವಿಷವಸ್ತು (ಟಾಕ್ಸಿನ್) ರಕ್ತದಲ್ಲಿ ಸೇರಿದಾಗ ರೋಗ ಕಂಡು ಬರುತ್ತದೆ.

**ರೋಗ ಹರಡುವ ಬಗೆ :**

ರೋಗಪೀಡಿತ ಮಗು ಕೆಮ್ಮಿದಾಗ, ಸೀತಾಗ, ಮಾತನಾಡುವಾಗ ರೋಗಾಣುಗಳು ವಾತಾವರಣ ಸೇರಿ ಆರೋಗ್ಯವಂತ ಮಕ್ಕಳು ಅಂಥ ಕಲುಷಿತ ಹವೆಯನ್ನು ಉಸಿರಾಡಿಸಿದಾಗ ಅವುಗಳಿಗೆ ಈ ರೋಗ ಅಂಟುತ್ತದೆ. ರೋಗಗ್ರಸ್ತ ಮಗುವು ನಿರೋಗಿ ಮಗುವಿಗೆ ಮುದ್ದುಕೊಟ್ಟಾಗ, ಇಲ್ಲವೆ ರೋಗಗ್ರಸ್ತ

ಮಗುವಿನ ಕರವಸ್ತ್ರ, ತಾಟು ಲೋಟ, ಆಟಿಗೆಯ ಸಾಮಾನು ಗಳಿಂದಲೂ ಇತರೇ ಮಕ್ಕಳಿಗೆ ರೋಗ ಹರಡಬಹುದು. ಒಮ್ಮೆ ರೋಗಾಣುಗಳು ನಿರೋಗಿ ಮಕ್ಕಳ ಗಂಟಲು ಸೇರಿದ ನಂತರ ೨ ರಿಂದ ೫ ದಿನಗಳಲ್ಲಿ ರೋಗದ ಲಕ್ಷಣಗಳು ಕಂಡು ಬರುತ್ತವೆ.

**ರೋಗದ ಲಕ್ಷಣಗಳು :**

ರೋಗದ ಪ್ರಾರಂಭಾವಸ್ಥೆಯಲ್ಲಿ ತಲೆನೋವು, ವಾಂತಿ, ಆಲಸ್ಯ, ಗಂಟಲು ನೋವು, ೧೦೧ ರಿಂದ ೧೦೩ ಡಿಗ್ರಿ ಜ್ವರ ಬಂದು ಗಂಟಲು ಉಬ್ಬಿ ಒಳಗೆ ಕೆಂಪಾಗುವದು ಕುತ್ತಿಗೆಯಲ್ಲಿಯ ಗ್ರಂಥಿಗಳು ಉಬ್ಬುತ್ತವೆ. ಮಗುವು ಮೈಕೈ ನೋವಿನಿಂದ ಬಳಲುವದಲ್ಲದೆ ನಿದ್ದೆಯನ್ನು ಮಾಡುವದಿಲ್ಲ. ಆಹಾರ ಹಾಗು ಉಗುಳು ನುಂಗಲೂ ತೊಂದರೆಯಾಗುತ್ತದೆ. ಡಿಫ್ತೀರಿಯಾ ರೋಗದ ಮಗುವು ಘೊಯ್ ಘೊಯ್, ಎಂದು ಕರ್ಕಶ ಧ್ವನಿಯಲ್ಲಿ ಕೆಮ್ಮುವದು ವಿಶೇಷ ಲಕ್ಷಣವಾಗಿದೆ.

**ರೋಗಪೀಡಿತ ಮಗುವಿನ ಗಂಟಲು ಪರೀಕ್ಷೆ:**

ಡಿಫ್ತೀರಿಯಾ ರೋಗಿಯ ಗಂಟಲನ್ನು ಒಳಗೆ ಪರೀಕ್ಷಿಸಿ ದಾಗ ಗಂಟಲಿನ ಎರಡೂ ಬದಿಗೂ ಬೆಳ್ಳಗಾದ ಪೊರೆಯಿದ್ದು, ಕ್ರಮೇಣ ಈ ಪೊರೆ ಅಂಗುಳ, ಅದರ ಕೆಳಗಿನ ಭಾಗಕ್ಕೂ, ಕಿರುನಾಲಿಗೆಗೆ ಅಂಟಿಕೊಳ್ಳುತ್ತದೆ. ಟಾನ್ಸಿಲ್‌ಗಳ ಮೇಲೆ ಸಣ್ಣ ಸಣ್ಣ ಬಿಳಿ ಚುಕ್ಕೆಗಳು ಕಾಣುತ್ತವೆ. ಈ ಪೊರೆಯನ್ನು ತೆಗೆ ಯಲು ಪ್ರಯತ್ನಿಸಿದರೆ ರಕ್ತಸ್ರಾವವಾಗುತ್ತದೆ. ಹಾಗು ಒಂದು ತರಹದ ಹೊಲಸು ವಾಸನೆಯು ಗಂಟಲಿನಿಂದ ಬರುತ್ತದೆ.

**ಉಸಿರಾಟದಲ್ಲಿ ತೊಂದರೆ :**

ರೋಗ ಮುಂದುವರೆದಂತೆ ಗಂಟಲಿನಲ್ಲಿ ಹೆಚ್ಚು ತೊಂದರೆ ಯಾಗಿ ಉಸಿರಾಡಿಸಲು ಕಷ್ಟವಾಗುತ್ತದೆ. ಈ ವೇಳೆಯಲ್ಲಿ ಸರಿ ಯಾದ ವೈದ್ಯಕೀಯ ಉಪಚಾರ ಮಗುವಿಗೆ ಸಿಗದೇ ಹೋದರೆ ಮರಣ ಹೊಂದುವದು ನಿಶ್ಚಿತ.

**ರೋಗದ ಕೊನೆಯ ಹಂತ :**

ರೋಗದ ಕೊನೆಯ ಹಂತದಲ್ಲಿ ಮಗುವಿನ ಬುದ್ಧಿ ಮಂಕಾಗುವದಲ್ಲದೆ, ಪ್ರಜ್ಞಾಹೀನವಾಗಲೂಬಹುದು. ಶರೀರದ ವಿವಿಧ ಭಾಗಗಳಲ್ಲಿ ರಕ್ತಸ್ರಾವವಾಗುತ್ತದೆ. ಈ ಹಂತವು ನಿಶ್ಚಿತ ವಾಗಿಯೂ ಸಾವಿನ ಸಂಕೇತವಾಗಿದೆ.

**ದೇಹದ ವಿವಿಧ ಅಂಗಾಗಗಳ ಮೇಲೆ ರೋಗದ ಪರಿಣಾಮ**

ರೋಗಾಣುಗಳಿಂದ ಉತ್ಪತ್ತಿಯಾದ ವಿಷವಸ್ತು ಮಗುವಿನ ರಕ್ತನಾಳ, ಶ್ವಾಸನಾಳ, ಧ್ವನಿಪೆಟ್ಟಿಗೆ, ಗಂಟಲು, ಮೂಗಿನ ಮೇಲೆ ಪರಿಣಾಮ ಮಾಡುತ್ತದೆ. ರೋಗದ ಪ್ರಾರಂಭಾವಸ್ಥೆಯಲ್ಲಿ ಸರಿ ಯಾದ ವೈದ್ಯಕೀಯ ಉಪಚಾರ ದೊರೆಯದೇ ಹೋದರೆ ಶ್ವಾಸ ಕೋಶಕ್ಕೆ ಸಂಬಂಧಿಸಿದ ಉರಿಯೂತ, ನಿಮೋನಿಯಾ, ಹೃದಯ ಹಾಗು ನರಮಂಡಲ, ಕಣ್ಣಿಗೂ ತೊಂದರೆಯಾಗಬಹುದು. ಶರೀರದ ಬೇರೆ ಬೇರೆ ಅಂಗಾಂಗಗಳಿಗೂ ಲಕ್ವಹೊಡೆಯಬಹುದು.

**ಉಪಚಾರ :**

ಡಿಫ್ತೀರಿಯಾ ಅಪಾಯಕಾರಿಯಾದುದರಿಂದ ಆದಷ್ಟು ರೋಗ ಬರದಂತೆ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಳ್ಳಬೇಕಲ್ಲದೆ ಹಾಗೇನಾದರೂ ಸಂಶಯ ಬಂದೊಡನೆ ತಡ ಮಾಡದೇ ಮಗು ವನ್ನು ವೈದ್ಯರಲ್ಲಿ ತೆಗೆದುಕೊಂಡು ಹೋಗಬೇಕು.

**ಪ್ರತಿಬಂಧಕೋಪಾಯಗಳು :**

ಮಕ್ಕಳಿಗೆ ವಿಶೇಷವಾಗಿ ಈ ರೋಗ ಬರುವದರಿಂದ ಅದನ್ನು ತಡೆಗಟ್ಟಲು ಮಗುವಿನ ೩ನೇ ತಿಂಗಳಿನಿಂದಲೇ ತ್ರಿರೋಗ ನಿರೋಧಕ ಚುಚ್ಚುಮದ್ದನ್ನು ಕೊಡಿಸಬೇಕು. ಮಕ್ಕಳ ಸ್ವಚ್ಛತೆಗೆ ಹೆಚ್ಚು ಗಮನಕೊಡಬೇಕಲ್ಲದೆ, ಒಂದು ಮಗುವಿನ ಎಂಜಿಲ ಮತ್ತೊಂದು ಮಗುವಿಗೆ ಕೊಡಬಾರದು. ಯಾವುದೇ ಮಗುವಿಗೆ ಕೆಮ್ಮು, ನೆಗಡಿ ಬಂದೊಡನೆ ವೈದ್ಯರ ಸಲಹೆ ಪಡೆಯಬೇಕಲ್ಲದೆ ಡಿಫ್ತೀರಿಯಾ ಲಕ್ಷಣ ಕಂಡೊಡನೆ ಆರೋಗ್ಯ ಇಲಾಖೆಗೆ ತಿಳಿಸಬೇಕು.

೪

# ಕೋಡಿಗ್ಗೆಮ್ಮು

ಹೆಚ್ಚಾಗಿ ೩ ವರ್ಷದೊಳಗಿನ ಮಕ್ಕಳಿಗೆ ಬರುವ ಈ ರೋಗಕ್ಕೆ 'ಹಿಮೋಫಿಲಿಸ್ ಪರ್ಟುಸಿಸ್' ಎಂಬ ರೋಗಾಣು ಕಾರಣವಾಗಿದೆ. ಇದು ಅಪಾಯಕಾರಿ ಅಂಟು ರೋಗವಾಗಿದ್ದು, ೬ ತಿಂಗಳ ಒಳಗಿನ ಮಕ್ಕಳಿಗೆ ಬಂದರೆ ಬದುಕುವುದೇ ದುಸ್ತರ. ಲಿಂಗ ಭೇದವಿಲ್ಲದೇ ಈ ರೋಗ ಬಂದರೂ ಹೆಣ್ಣು ಮಕ್ಕಳೇ ಇದಕ್ಕೆ ಹೆಚ್ಚಾಗಿ ಬಲಿಯಾಗುತ್ತಾರೆ.

ಮಗು ಕೆಮ್ಮುವಾಗ ನಾಯಿಬೊಗಳಿದಂತಾಗುವುದರಿಂದ ಇದಕ್ಕೆ 'ನಾಯಿ ಕೆಮ್ಮು' ಎಂತಲೂ, ಗ್ರಾಮ್ಯ ಭಾಷೆಯಲ್ಲಿ 'ಕೋಡಿಗೆಮ್ಮು' ಎಂತಲೂ ಕರೆಯುತ್ತಾರೆ. ಕೊಳಚೆ ಪ್ರದೇಶದಲ್ಲಿ, ಜನನಿಬಿಡ ಪ್ರದೇಶಗಳಲ್ಲಿ ಇದು ಹೆಚ್ಚಾಗಿ ಕಂಡುಬರುತ್ತಿದ್ದು, ವರ್ಷದ ಎಲ್ಲ ತಿಂಗಳುಗಳಲ್ಲಿ ಇರಬಹುದಾದರೂ ಹೆಚ್ಚಾಗಿ ಮಾರ್ಚ–ಎಪ್ರಿಲ್‌ದಲ್ಲಿ ಉಗ್ರರೂಪ ತಾಳುತ್ತದೆ.

**ರೋಗ ಪ್ರಸಾರ:**

ಕೋಡಿಗ್ಗೆಮ್ಮಿನಿಂದ ಬಳಲುವ ಮಗು ಕೆಮ್ಮಿದಾಗ, ಸೀತಾಗ ರೋಗಾಣುಗಳು ವಾತಾವರಣ ಸೇರುತ್ತವೆ. ಅಂಥ ರೋಗಾಣು ಮಿಶ್ರಿತ ಹವೆಯನ್ನು ಇತರೇ ನಿರೋಗಿ ಮಕ್ಕಳು ಉಸಿರಾಡಿದರೆ, ಇಲ್ಲವೆ ರೋಗಿಯ ತಾಟು, ಲೋಟ, ಹಾಸಿಗೆ, ಟಾವೆಲ್ ಅಡಿಗೆಯ ಸಾಮಾನುಗಳ ಉಪಯೋಗದಿಂದಲೂ ರೋಗ ಪ್ರಸಾರವಾಗುತ್ತದೆ.

**ರೋಗ ಕಂಡುಬರುವ ಅವಧಿ :**

ರೋಗಾಣುಗಳು ನಿರೋಗಿ ಮಕ್ಕಳ ಗಂಟಲನ್ನು ಸೇರಿ ರೋಗ ಕಂಡುಬರಬೇಕಾದರೆ ೭ರಿಂದ೨೧ ದಿನಗಳು ಬೇಕಾಗುತ್ತವೆ.

**ರೋಗದ ಲಕ್ಷಣಗಳು :**

ಮೊದಲು ಆಗಾಗ್ಗೆ ಸ್ವಲ್ಪ ಕೆಮ್ಮು ಬಂದು ರೋಗ ಮುಂದು ವರೆದಂತೆ ಸತತವಾಗಿ ಕೆಮ್ಮು ಇರುತ್ತದೆ. ಕೆಮ್ಮು ರಾತ್ರಿ ವೇಳೆಯಲ್ಲಿ ಹೆಚ್ಚು ಆಗುತ್ತದೆ. ಕೆಮ್ಮಿನೊಂದಿಗೆ ನೆಗಡಿ, ಸೀನು ಇರುತ್ತದೆ. ಹಸಿವು ಇಲ್ಲವಾಗಿ ಮಗು ಆಹಾರವನ್ನು ಬಿಡುತ್ತದೆ. ಧ್ವನಿ ಒಡೆಯುತ್ತದೆ. ಉಸಿರು ಬಿಡುವಾಗ ಒಂದೇ ಸವನೆ ಕೆಮ್ಮು ಬರುತ್ತದೆ. ಮುಖ ಕೆಂಪಾಗಿ ಕೆಲವೊಮ್ಮೆ ನೀಲಿಯಾಗುತ್ತದೆ. ಕಣ್ಣುಗಳಿಗೆ ಬಾವು ಬರುತ್ತದೆ. ಕೆಮ್ಮಿನೊಂದಿಗೆ ವಾಂತಿಯಾಗು ವುದು. ಮಗುವು ಸುಸ್ತಾಗಿ ತಲೆದಿಂಬಿಗಾಗಲಿ, ಟೇಬಲ್ಲಿಗಾಗಲಿ ತಲೆಬಾಗಿಸಿ ಕೂಡ್ರುತ್ತದೆ. ರೋಗ ಉಲ್ಬಣವಾದಂತೆ ಉಸಿರಾ ಟದಲ್ಲಿ ತೊಂದರೆಯಾಗಿ ಉಸಿರು ಕಟ್ಟುತ್ತದೆ. ಜ್ವರವು ಬರುತ್ತದೆ. ಬಾಯಿ ತೆರೆದು ಮಗು ಗಾಳಿಯಲ್ಲಿ ಉಸಿರಾಡಿಸಲು ಬಯಸುತ್ತದೆ.

**ಕೋಡಿಗ್ಗೆಮ್ಮಿನ ದುಷ್ಪರಿಣಾಮಗಳು :**

ಕೋಡಿಗ್ಗೆಮ್ಮು ಅನೇಕ ದುಷ್ಪರಿಣಾಮಗಳಿಗೆ ಎಡೆಮಾಡು ತ್ತದೆ. ಕೆಮ್ಮು ಅತಿಯಾದರೆ ಕಣ್ಣಿನಲ್ಲಿ ರಕ್ತಸ್ರಾವವಾಗಿ ಕೆಂಪಗೆ ಬೆಂಕಿಯ ಕೆಂಡದ ಹಾಗೆ ಇರುತ್ತವೆ. ಕಿವಿಯ ಪಟಲ ಹರಿಯ ಬಹುದು. ಮೂಗಿನಲ್ಲಿ ರಕ್ತಸ್ರಾವವಾಗುತ್ತದೆ. ಶ್ವಾಸನಾಳದ ಉರಿತ, ಗಂಟಲು ಉರಿತ, ನಿಮೋನಿಯಾ, ಶ್ವಾಸಕೋಶದ ಹೊರ ಚೀಲದಲ್ಲಿ ನೀರು, ಕೀವು, ಗಾಳಿ ತುಂಬಬಹುದು. ಗೆಜ್ಜೆ,

ಹೊಕ್ಕಳದ ಹರ್ನಿಯಾ ಆಗಬಹುದು. ರಕ್ತವಾಂತಿ, ಬಾಯಲ್ಲಿ ಹುಣ್ಣು, ಮೂರ್ಛೆ ರೋಗ, ದೃಷ್ಟಿ ಕಡಿಮೆಯಾಗಬಹುದು. ಮೆದುಳಿನಲ್ಲಿ ರಕ್ತಸ್ರಾವವಾಗಿ ಲಕ್ವ ಹೊಡೆಯಬಹುದು. ಕಾರಣ ಅದೇನು ಕೆಮ್ಮು ಮಹಾ ! ಎಂದು ನಿರ್ಲಕ್ಷಿಸುವುದು ಬಹಳೇ ಅಪಾಯಕರ.

**ಪಾಲಕರಿಗೆ ಸೂಚನೆ :**

ನಾಯಿಕೆಮ್ಮು ಒಂದು ತರದ ರೋಗಾಣುಗಳಿಂದ ಬರುವ ರೋಗವಾಗಿದ್ದು ಮೂಢನಂಬಿಕೆಯಲ್ಲಿ ವೇಳೆ ಹರಣವಾಗಿ ಮಗುವನ್ನು ಪ್ರಾಣಾಪಾಯಕ್ಕೆಡೆ ಮಾಡಿ ನಂತರ ಚಿಂತಿಸಿ ಫಲವಿಲ್ಲ. ಕಾರಣ ಪಾಲಕರು ಮಗುವಿಗೆ ಕೆಮ್ಮು ಹತ್ತಿದೊಡನೆ ವೈದ್ಯರ ಸಲಹೆ ಪಡೆಯಬೇಕು. ಇನ್ನುಳಿದ ಆರೋಗ್ಯವಂತ ಮಕ್ಕಳನ್ನು ರೋಗಪೀಡಿತ ಮಗುವಿನ ಹತ್ತಿರ ಬಿಡಬಾರದು. ಮಗುವು ಉಪಯೋಗಿಸುವ ತಾಟು, ಲೋಟ, ಇತರರು ಉಪಯೋಗಿಸಬಾರದು. ಮಗುವಿಗೆ ಸಂಪೂರ್ಣ ವಿಶ್ರಾಂತಿ ಅವಶ್ಯವಿರುತ್ತದೆ. ಮಗುವನ್ನು ಓಡಾಡಲು ಬಿಡಬಾರದು. ಚಳಿ, ಶಕೆಯಿಂದ ಮಗುವನ್ನು ರಕ್ಷಿಸಬೇಕು. ಮಗುವಿಗೆ ಹಾಲು, ಹಣ್ಣಿನ ರಸ, ಗಂಜಿ ಮುಂತಾದವುಗಳನ್ನು ಕೊಡಬೇಕು.

**ಪ್ರತಿಬಂಧಕೋಪಾಯಗಳು :**

ರೋಗ ಬಂದ ನಂತರ ಉಪಚರಿಸುವುದಕ್ಕಿಂತ ರೋಗ ಬರದಂತೆ ಪ್ರತಿಬಂಧಿಸಲು ಮಗುವಿನ ೩ನೇ ತಿಂಗಳಿಂದಲೇ ತ್ರಿಸಂಯೋಗ (Triple antigen) ಲಸಿಕೆಯನ್ನು ಪ್ರತಿತಿಂಗಳು ೩ ಸಲ ಹಾಕಿಸಬೇಕು. ಒಂದು ಹಾಗೂ ಮೂರು ವರ್ಷದ ನಂತರ ಪುನಃ ವರ್ಧಕ ಚುಚ್ಚುಮದ್ದನ್ನು (Booterdose) ಹಾಕಿಸಬೇಕು.

# ಮರಣಾಂತಿಕ ರೋಗ ಧನುರ್ವಾಯು

ಧನುರ್ವಾಯು ಸಾಂಕ್ರಾಮಿಕ ರೋಗಗಳಲ್ಲಿಯೇ ಭಯಾನಕವಾದ ಹಾಗೂ ಮರಣಾಂತಿಕವಾದ ರೋಗವಾಗಿದೆ. ದೇಶದ ಎಲ್ಲೆಡೆಯೂ, ಯಾವುದೇ ಕಾಲದಲ್ಲೂ, ಎಲ್ಲ ವಯಸ್ಸಿನವರಿಗೂ ಈ ರೋಗ ಬರಬಹುದು.

ಇದರಲ್ಲಿ ರೋಗಿಯ ಶರೀರವು ಬಿಲ್ಲಿನಂತೆ ಬಾಗುವುದರಿಂದ 'ಧನುರ್ವಾಯು' ಎಂದು ಹೆಸರಿಸಲಾಗಿದೆ. ಗ್ರಾಮೀಣ ಭಾಷೆಯಲ್ಲಿ 'ಇದಕ್ಕೆ 'ಸೆಟೆರೋಗ'ವೆಂತಲೂ ಕರೆಯುತ್ತಾರೆ.

**ರೋಗಕ್ಕೆ ಕಾರಣ :**

'ಕ್ಲಾಸ್ಟ್ರಿಡಿಯಂ ಟಿಟ್ಯಾನೈ' ಎಂಬ ಸೂಕ್ಷ್ಮ ರೋಗಾಣುಗಳು ಇದಕ್ಕೆ ಕಾರಣವಾಗಿದ್ದು, ಶರೀರದ ಮೇಲಿನ ಚಿಕ್ಕಪುಟ್ಟ ಗಾಯಗಳ ಮೂಲಕ, ದೇಹ ಸೇರಿದಾಗ ಅಪಾಯಕಾರಿ 'ವಿಷವಸ್ತು' (ಟಾಕ್ಸಿನ್) ಉತ್ಪತ್ತಿಯಾಗಿ ಅದು ಮೆದುಳು, ಮೆದುಳುಬಳ್ಳಿ ಹಾಗೂ ಸ್ನಾಯುಗಳ ಮೇಲೆ ಪರಿಣಾಮ ಮಾಡಿದಾಗ ಸ್ನಾಯುಗಳಲ್ಲಿ ನೋವಿನ ಸೆಳೆತಗಳುಂಟಾಗಿ ರೋಗಿಯು ಚಡಪಡಿಸುತ್ತಾನೆ.

ಸಾಮಾನ್ಯವಾಗಿ ನಮ್ಮ ದೇಶದಲ್ಲಿ ಹೆರಿಗೆಗಳು ಮನೆಯಲ್ಲಿಯೇ ಆಗುವದರಿಂದ ಹೆಚ್ಚಾಗಿ ಹಳ್ಳಿಯಲ್ಲಿರುವ ನಾಟೀ ಸೂಲಗಿತ್ತಿಯರೇ ಹೆರಿಗೆ ಮಾಡಿಸುವದರಿಂದ ಬಾಣಂತಿಗೆ ಹಾಗೂ ನವಜಾತ ಶಿಶುವಿಗೆ ಈ ರೋಗ ತಗಲುತ್ತದೆ. ರೋಗದ ಬಗೆಗೆ ಏನೂ ಅರಿಯದ ಈ ಸೂಲಗಿತ್ತಿಯರು ಮನೆಯಲ್ಲಿಯೇ ದೊರೆಯಬಹುದಾದ ಜಂಗು ಹತ್ತಿದ, ಹೊಲಸಾದ ಕತ್ತರಿ ಚಾಕು, ಕುಡಗೋಲಿನಿಂದ ಹೊಕ್ಕಳಹುರಿ ಕೊಯ್ಯುತ್ತಾರೆ; ಇಲ್ಲವೆ ಹೊಲಸು ದಾರವನ್ನು ಹೊಕ್ಕಳ ಹುರಿಗೆ ಕಟ್ಟಿದರೆ, ಹೊಲಸು ಅರಿವೆಯನ್ನೇ ಮಗುವಿನ ಹೊಕ್ಕಳ ಹುರಿಗೆ ಹಾಕಿದರೆ ಈ ರೋಗ ಬರುವ ಸಾಧ್ಯತೆಯುಂಟು.

ರೋಗಾಣುಗಳು ಇರುವ ಸಳ ಮುಖ್ಯವಾಗಿ ಹುಲ್ಲು ತಿನ್ನುವ ಪ್ರಾಣಿಗಳ ಕರುಳಿನಲ್ಲಿ ಎಂದು ಹೇಳಬಹುದು. ಅದರಲ್ಲೂ ವಿಶೇಷವಾಗಿ ಕುದುರೆಯ ಕರುಳಿನಲ್ಲಿ ಇರುತ್ತವೆ. ದನಗಳ ಶೆಗಣಿ, ಆನೆ ಹಾಗೂ ಕುದುರೆಯ ಲದ್ದಿಯಲ್ಲಿರುವದರಿಂದ ಲದ್ದಿ ಒಣಗಿದ ಮೇಲೆ ಸಹಜವಾಗಿಯೇ ಧೂಳಿನ ಜೊತೆ ವಾತಾವರಣ ಸೇರುತ್ತವೆ. ಹೀಗಾಗಿ ಇಂಥ ದನದ ಶೆಗಣಿ ಹಾಗೂ ಲದ್ದಿಯನ್ನು ಗೊಬ್ಬರ ರೂಪದಲ್ಲಿ ಹೊಲಕ್ಕೆ ಹಾಕಿದಾಗ ಹೊಲಗದ್ದೆಗಳ, ತೋಟಗಳ ಮಣ್ಣಿನಲ್ಲಿ ರೋಗಾಣುಗಳು ಉಳಿಯುತ್ತವೆ. ವಿಷಮ ಪರಿಸ್ಥಿತಿಯನ್ನು ಎದುರಿಸಬಲ್ಲ ಶಕ್ತಿಯನ್ನೂ ಈ ರೋಗಾಣುಗಳು ಪಡೆದಿರುವದರಿಂದ ಅನೇಕ ವರ್ಷಗಳವರೆಗೂ ಧೂಳು ಹಾಗೂ ಮಣ್ಣಿನಲ್ಲಿರುತ್ತವೆ. ಅನುಕೂಲಕರ ವಾತಾವರಣದಲ್ಲಿ ರೋಗಾಣುಗಳು ವೃದ್ಧಿ ಹೊಂದುತ್ತವೆ.

## ಮಕ್ಕಳಿಗೆ ರೋಗ ಹೇಗೆ ಬರುತ್ತದೆ?

ಮಕ್ಕಳು ಹೆಚ್ಚಾಗಿ ಮಣ್ಣಿನಲ್ಲಿ ಆಟವಾಡುವಾಗ, ಓಡಾಡುವಾಗ ಗಾಯಮಾಡಿಕೊಳ್ಳುತ್ತಾರೆ. ಚೂಪಾದ ಮೊಳೆ ನಡೆಸಿಕೊಳ್ಳುವುದು, ಕುಡಗೋಲು, ಕತ್ತರಿಯಿಂದ ಗಾಯ ಮಾಡಿಕೊಳ್ಳುವುದು, ಹಲ್ಲಲ್ಲಿ ಪಿನ್ನು, ಟಾಚಣಿ ಇಟ್ಟುಕೊಳ್ಳುವುದು, ಸುಟ್ಟು ಗಾಯ ಮಾಡಿಕೊಳ್ಳುವುದು, ಕಿವಿ ಸೋರಿದರೆ ಕಿವಿಯಲ್ಲಿ ಕಡ್ಡಿ ಇಡುವುದು ಈ ಮುಂತಾದವುಗಳಿಂದ ಉಂಟಾದ ಗಾಯಗಳ ಮೂಲಕ ರೋಗಾಣುಗಳು ದೇಹ ಸೇರುತ್ತವೆ. ಇಲಿ, ನಾಯಿ, ನರಿ, ಬೆಕ್ಕು, ಮುಂತಾದವುಗಳ ಕಡಿತದ ಗಾಯದ ಮೂಲಕವೂ ರೋಗಾಣುಗಳು ದೇಹ ಸೇರುತ್ತವೆ. ಒಟ್ಟಿನಲ್ಲಿ ದೇಹಕ್ಕಾದ ಯಾವುದೇ ಗಾಯದಿಂದಲೂ (ಯಾವುದೇ ವಸ್ತುವಿನಿಂದಾದರೂ) ಈ ರೋಗ ಬರಬಹುದು.

## ಸುಲಭವಾಗಿ ಯಾರು ರೋಗಕ್ಕೆ ಬಲಿಯಾಗುತ್ತಾರೆ?

ಎಲ್ಲ ವಯಸ್ಸಿನವರಿಗೂ ರೋಗ ಬರಬಹುದಾದರೂ ಚಿಕ್ಕ ಮಕ್ಕಳಲ್ಲಿ ಇದರ ಪ್ರಮಾಣ ಹೆಚ್ಚು.

ಒಮ್ಮೆ ಗಾಯಗಳ ಮೂಲಕ ರೋಗಾಣುಗಳು ದೇಹವನ್ನು ಸೇರಿದ ನಂತರ ರೋಗ ಕಾಣಬೇಕಾದರೆ ೩ ದಿನಗಳಿಂದ ೩ ವಾರ ಬೇಕಾಗುತ್ತದೆ.

ಧನುರ್ವಾಯು ಬಂದರೆ ಶೇ. ೩೦ ರಿಂದ ೫೦ರಷ್ಟು ಮಕ್ಕಳಲ್ಲಿ ಸಾವು ನಿಶ್ಚಿತ.

**ರೋಗದ ಲಕ್ಷಣಗಳು :**

ರೋಗದ ಲಕ್ಷಣಗಳು ಕಂಡುಬರುವುದು ರೋಗಾಣುವಿನಿಂದ ಉತ್ಪತ್ತಿಯಾದ ವಿಷವಸ್ತು ನರಗಳ ಮೇಲೆ ಪರಿಣಾಮ ಮಾಡಿದಾಗ ಮಾತ್ರ. ರೋಗದ ಪ್ರಾರಂಭಾವಸ್ಥೆಯಲ್ಲಿ ದವಡೆಯ ಮಾಂಸಖಂಡಗಳಲ್ಲಿ ಸೆಳೆತಗಳು ಬಂದ ನಂತರ ಕುತ್ತಿಗೆ, ಬೆನ್ನು, ನಡು, ಎದೆ, ಹೊಟ್ಟೆ, ಶ್ವಾಸನಾಳ, ಕೈಕಾಲುಗಳ ಮಾಂಸಖಂಡಗಳಲ್ಲಿ ಬರುತ್ತವೆ. ರೋಗಿಯ 'ಹಲ್ಲುದವಡಿ' ಕಚ್ಚಿದ್ದು ಬಾಯಿ ತೆರೆಯಲು ಸಾಧ್ಯವಾಗದು. ಸೆಳೆತಗಳು ನೋವಿನಿಂದ ಕೂಡಿದ್ದು ಮಗುವು ವಿಪರೀತ ಯಾತನೆ ಅನುಭವಿಸುತ್ತದೆ. ಆಹಾರ ನುಂಗಲು ತೊಂದರೆಯಾಗುತ್ತದೆ.

ರೋಗವು ಮುಂದುವರಿದಂತೆ ಮನಸ್ಸಿನಲ್ಲಿ ಹಳಾಹಳಿ, ನಿದ್ದೆ ಬಾರದಿರುವದು, ಬೆವರುವದು, ಜ್ವರ, ತಲೆನೋವು, ಮಗುವಿನ ಮುಖವು ವಿಕಾರ ರೂಪವನ್ನು ತಾಳುವದರಿಂದ ನೋಡಲು ಅಂಜಿಕೆ ಬರುತ್ತದೆ. ಸೆಳೆತಗಳು ಬಂದಾಗ ಮಗುವಿನ ದೇಹವು (ಬೆನ್ನು) ಬಿಲ್ಲಿನಂತೆ ಹಿಂದೆ ಬಾಗುವದಲ್ಲದೆ ಕಬ್ಬಿಣದ ಪಟ್ಟಿಯಂತೆ ಬಿರುಸಾಗುತ್ತದೆ. ಸೆಳೆತಗಳು ತೀವ್ರವಾದಾಗ ರಕ್ತನಾಳಗಳು ಹರಿದು ರಕ್ತಸ್ರಾವವಾಗಲೂ ಬಹುದು.

ರೋಗಿಯಲ್ಲಿ ಸ್ವಲ್ಪೇ ಸಪ್ಪಳಕ್ಕೆ, ಪ್ರಕಾಶಮಾನವಾದ ಬೆಳಕಿಗೆ ಅಥವಾ ಗಾಳಿ ಬೀಸಿದರೂ ಸೆಳೆತಗಳು ಬರುತ್ತವೆ. ಸೆಳೆತಗಳು ಮೊದಮೊದಲು ಆಗಾಗ ಬಂದರೂ ಕೊನೆಗೆ ಸತತವಾಗಿ ಬರುತ್ತವೆ.

ಸಾವು ಸಮೀಪಿಸಿದಂತೆ ಮಗುವಿಗೆ ಮೂತ್ರ ಕಟ್ಟಾಗುವದು, ಉಸಿರಾಟದಲ್ಲಿ ತೊಂದರೆ, ಹೃದಯದಲ್ಲಿ ಬಿಗಿತವಾಗುತ್ತದೆ.

**ಪ್ರತಿಬಂಧಕ ಉಪಾಯಗಳು :**

ಸಾವಿನ ಸಂಕೇತವಾದ ಧನುರ್ವಾಯುವನ್ನು ಗುಣಪಡಿಸುವದು ತೊಂದರೆದಾಯಕವಾಗಿರುವದರಿಂದ ರೋಗ ಬರದಂತೆ ಪ್ರತಿಬಂಧಿಸುವುದೇ ಲೇಸು. ರೋಗ ನಿಧಾನ ಹಾಗೂ ಉಪಚಾರದಲ್ಲಿ ವಿಳಂಬವಾದಷ್ಟೂ ರೋಗ ಗುಣವಾಗುವ ಸಾಧ್ಯತೆ ತೀರಾ ಕಡಿಮೆ ಇರುತ್ತದೆ. ಕಾರಣ ಧನುರ್ವಾಯು ರೋಗಾಣುಗಳು ಇರುವಂಥ ಪ್ರದೇಶದಲ್ಲಿ ಉದಾ: ಮಣ್ಣಿನಲ್ಲಿ ಆಡುವ ಮಕ್ಕಳಿಗೆ, ಕಾರಖಾನೆಗಳಲ್ಲಿ ದುಡಿಯುವ ಮಕ್ಕಳಿಗೆ, ಹೊಲ ಗದ್ದೆಗಳಲ್ಲಿ ದುಡಿಯುವ ಮಕ್ಕಳಿಗೆ ಮುಂಜಾಗ್ರತಾ ಕ್ರಮವಾಗಿ ಧನುರ್ವಾಯು ನಿರೋಧಕ ಚುಚ್ಚುಮದ್ದನ್ನು ಕೊಡಿಸಬೇಕು. ಚಾಕು, ಕತ್ತರಿ, ಬ್ಲೇಡ, ಟಾಚಣಿ, ಕುಡಗೋಲು ಮುಂತಾದ ವಸ್ತುಗಳಿಂದ ಗಾಯಗಳಾದರೆ ತಕ್ಷಣವೇ ಸಲಹೆ ಪಡೆಯಬೇಕು. ಸ್ವತಃ ಡಾಕ್ಟರರೇ ಈ ರೋಗಕ್ಕೆ ಯಾವ ಪ್ರಕಾರದ ಉಪಚಾರವನ್ನು ಕೊಡಬೇಕೆಂಬ ನಿರ್ಣಯ ತೆಗೆದುಕೊಳ್ಳುವವರಾಗಿರುವದರಿಂದ ನಿಮ್ಮ ಮಗುವಿಗೆ ಯಾವಾಗ ಧನುರ್ವಾಯು ನಿರೋಧಕ ಚುಚ್ಚುಮದ್ದನ್ನು ಕೊಡಲಾಗಿತ್ತೆಂಬುದನ್ನು ಅವರಿಗೆ ತಿಳಿಸುವುದು ನಿಮ್ಮ ಕರ್ತವ್ಯವಾಗಿದೆ. ಈ ರೋಗದ ಶುಶ್ರೂಷೆ ಅಥವಾ ಉಪಶಮನಕ್ಕಾಗಿ ನೀವೇ ನಿರ್ಧಾರ ತೆಗೆದುಕೊಳ್ಳುವುದು ಹಿತವಲ್ಲ.

## ಧನುರ್ವಾಯು ತಡೆಗಟ್ಟಲು ಪ್ರಥಮ ಚಿಕಿತ್ಸೆ :

ನಿಮ್ಮ ಮಕ್ಕಳಿಗೆ ಗಾಯಗಳಾದ ಕೂಡಲೇ ಹೊಲಸು ವಸ್ತುಗಳು ಸೇರದಂತೆ ಎಚ್ಚರಿಕೆ ವಹಿಸಬೇಕು. ಸಬಕಾರದ ನೀರು, ಹೈಡ್ರೋಜನ್ ಪೆರಾಕ್ಸೈಡ್, ರೋಗಾಣು ನಿರೋಧಕ ದ್ರಾವಣ ಇಲ್ಲವೆ ಬಿಸಿನೀರಿನಿಂದ ಗಾಯವನ್ನು ತೊಳೆದು ಶುಭ್ರ ವಾದ ಒಂದು ಅರಿವೆ ತುಂಡನ್ನು ಅದರ ಮೇಲೆ ಹಾಕಿ ವೈದ್ಯರ ಸಲಹೆ ಪಡೆಯಬೇಕು.

## ಚಿಕ್ಕ ಮಕ್ಕಳಲ್ಲಿ ಧನುರ್ವಾಯು ತಡೆಗಟ್ಟುವದು :

ಧನುರ್ವಾಯು, ನಾಯಿಕೆಮ್ಮು ಹಾಗೂ ಗಂಟಲಬೇನೆ ಮೂರನ್ನೂ ತಡೆಗಟ್ಟಲು ತ್ರಿಸಂಯೋಗ ಚುಚ್ಚುಮದ್ದನ್ನು ಮಗುವಿನ ೩ನೇ ತಿಂಗಳಿನಿಂದಲೇ ೪ ರಿಂದ ೬ ವಾರಗಳ ಅಂತರ ದಲ್ಲಿ ೩ ಸಲ ಹಾಕಿಸಬೇಕು. ಇದಾದ ಒಂದು ಹಾಗೂ ಮೂರು ವರ್ಷದ ನಂತರ ಪುನಃ ವರ್ಧಕ ಚುಚ್ಚುಮದ್ದನ್ನು (ಬೂಸ್ಟರ್ ಡೋಚ್) ಹಾಕಿಸಬೇಕು. ಇದು ಧನುರ್ವಾಯುವಿನ ವಿರುದ್ಧ ಮಗುವಿಗೆ ಸಂಪೂರ್ಣ ರಕ್ಷಣೆ ಕೊಡುತ್ತದೆ.

ಗರ್ಭಿಣಿ ಸ್ತ್ರೀಯರಿಗೆ ಟಿಟ್ಯಾನಸ್ ಟಾಕ್ಸೈಡದ ಚುಚ್ಚು ಮದ್ದನ್ನು ೩ ಸಲ ಕೊಡಿಸಿದರೆ ತಾಯಿಯು ಹಾಗೂ ಮಗುವು ರೋಗದ ವಿರುದ್ಧ ರಕ್ಷಣೆ ಪಡೆಯುತ್ತಾರೆ.

೬

# ಮಕ್ಕಳ ಕ್ಷಯ.

ಬೆಳೆಯುತ್ತಿರುವ ನಮ್ಮ ದೇಶದಲ್ಲಿ ಕ್ಷಯರೋಗವು ಒಂದು ಬೃಹತ್ ಸಾರ್ವಜನಿಕ ಆರೋಗ್ಯ ಸಮಸ್ಯೆಯಾಗಿದೆ. ಎಲ್ಲ ವಯಸ್ಸಿನವರಿಗೆ ಇದು ಬರಬಹುದಾದರೂ ಮಕ್ಕಳಿಗೆ ಬಲು ಸುಲಭವಾಗಿ ಅಂಟುವ ಸಾಂಕ್ರಾಮಿಕ ರೋಗವಾಗಿದೆ. ಕ್ಷಯ ರೋಗಕ್ಕೆ ತುತ್ತಾದ ಮಗು ಪ್ರಾಣಕ್ಕೆರವಾಗಬಹುದು.

ಕ್ಷಯ ರೋಗಿಗಳು ದೇಶದಲ್ಲಿ ೧೯೭೩ರ ಗಣತಿ ಪ್ರಕಾರ ೮೦ ಲಕ್ಷಕ್ಕೂ ಮಿಕ್ಕಿದ್ದರೆ ಕರ್ನಾಟಕದಲ್ಲಿಯೇ ೬ ಲಕ್ಷವನ್ನು ಮೀರುತ್ತವೆ.

ಮಕ್ಕಳಲ್ಲಿ ಕ್ಷಯರೋಗದ ಪ್ರಮಾಣ ಭಾರತೀಯ ವೈದ್ಯಕೀಯ ಸಂಶೋಧನಾ ಸಂಸ್ಥೆಯ ಪ್ರಕಾರ ಹುಟ್ಟಿದ ನಾಲ್ಕು ವರ್ಷಗಳೊಳಗೆ ಶೇ. ೨.೧ ರಷ್ಟು ಮಕ್ಕಳಿಗೆ, ಮಗುವಿನ ೧೦ ರಿಂದ ೧೪ನೇ ವಯಸ್ಸಿನೊಳಗೆ ಶೇ. ೧೪.೫ರಷ್ಟು ಮಕ್ಕಳಿಗೆ ಕ್ಷಯರೋಗವು ಅಂಟುತ್ತದೆ. ಬೆಂಗಳೂರಿನ ವಾಣೀವಿಲಾಸ ಆಸ್ಪತ್ರೆಯ ದಾಖಲೆಯ ಪ್ರಕಾರ ಒಟ್ಟು ಒಳರೋಗಿಗಳಾಗುವ ಮಕ್ಕಳಲ್ಲಿ ಶೇ. ೪.೪ ರಷ್ಟು ಕ್ಷಯದಿಂದ ಬಳಲುವ ಮಕ್ಕಳಾಗಿರುತ್ತವೆ.

**ರೋಗಕ್ಕೆ ಕಾರಣ :**

ಕ್ಷಯರೋಗ ಬರಲು "ಮೈಕೋಬೆಕ್ಟೀರಿಯಂ ಟುಬರ ಕುಲೈ" ಎಂಬ ಸೂಕ್ಷ್ಮ ರೋಗಾಣುಗಳು ಕಾರಣವಾಗಿರುತ್ತವೆ.

**ರೋಗ ಹರಡುವ ಬಗೆ :**

ಕ್ಷಯದಿಂದ ಬಳಲುವವರು ಕೆಮ್ಮಿದಾಗ, ಸೀತಾಗ, ಉಗುಳಿದಾಗ, ಗಟ್ಟಿಯಾಗಿ ಮಾತನಾಡಿದಾಗ ರೋಗಾಣುಗಳು ಗಾಳಿಯಲ್ಲಿ ಸೇರುತ್ತವೆ. ರೋಗಾಣು ಮಿಶ್ರಿತ ಗಾಳಿಯನ್ನು ಆರೋಗ್ಯವಂತರು ಉಸಿರಾಡಿಸಿದಾಗ ಅವರಿಗೆ ಸಹಜವಾಗಿಯೇ ರೋಗ ತಗಲುತ್ತದೆ. ತಿನ್ನುವ ಆಹಾರ, ಕಾಯಿಸದೇ ಕುಡಿಯುವ ಹಾಲು, ನೀರಿನಿಂದಲೂ ರೋಗಹರಡುವ ಸಾಧ್ಯತೆ ಇರುತ್ತದೆ.

**ಯಾರಿಗೆ ರೋಗವು ಸುಲಭವಾಗಿ ಅಂಟುತ್ತದೆ ?**

ಪೌಷ್ಠಿಕ ಆಹಾರ ಸೇವಿಸದ ಮಕ್ಕಳಿಗೆ, ಜನಸಾಂದ್ರತೆ ಹೆಚ್ಚಿರುವ ಪ್ರದೇಶದ ಮಕ್ಕಳಿಗೆ, ಹೊಲಸು ವಾತಾವರಣದಲ್ಲಿ ಬೆಳೆಯುವ ಮಕ್ಕಳಿಗೆ, ಮನೆಯಲ್ಲಿ ಯಾರಾದರೂ ಕ್ಷಯರೋಗಿ ಇದ್ದರೆ ಅಂಥ ಮಕ್ಕಳಿಗೆ ಬಲು ಸುಲಭವಾಗಿ ಅಂಟುತ್ತದೆ.

**ರೋಗದ ಲಕ್ಷಣಗಳು :**

ಕ್ಷಯದ ಪ್ರಾರಂಭಾವಸ್ಥೆಯಲ್ಲಿ ಸಣ್ಣಾಗಿ ಜ್ವರ ಬಂದು ಸಾಯಂಕಾಲ ಮೈ ಬಿಸಿ ಹೆಚ್ಚು ಇದ್ದು ಆಗಾಗ ಗುಸು ಗುಸು ಕೆಮ್ಮು ಇರುತ್ತದೆ. ನಂತರ ಕೆಮ್ಮಿನೊಂದಿಗೆ ಕಫವೂ ಬೀಳು ವದು. ರಾತ್ರಿ ಜ್ವರ ಆರುವಾಗ ಬೆವರು ಬರುತ್ತದೆ. ರೋಗ ಮುಂದುವರೆದಂತೆ ಮಗು ಊಟ ಮಾಡದೇ ನಿರುತ್ಸಾಹದಿಂದಿರು ತ್ತದೆ. ತೂಕವು ಕಡಿಮೆ ಆಗಿ ಸೊರಗುತ್ತದೆ.

ಹೆಚ್ಚು ಆಹಾರ ಕೊಟ್ಟರೆ ಹೊಟ್ಟೆ ಉಬ್ಬುವದು. ವಾಂತಿ ಆಗುವದಲ್ಲದೇ ಭೇದಿಯೂ ಹತ್ತಬಹುದು. ಮೊದಲು ಆಗಾಗ ಬರುವ ಕೆಮ್ಮು ದಿನಗಳೆದಂತೆ ಸತತವಾಗಿ ಬಂದು, ಉಬ್ಬುಸು ಪ್ರಾರಂಭವಾಗುತ್ತದೆ. ಕಫವು ಹೊಲಸು ವಾಸನೆಯದಿದ್ದು, ಆದರೊಂದಿಗೆ ರಕ್ತವೂ ಬೀಳಬಹುದು. ರೋಗವು ಮುಂದುವರೆದಂತೆ ಧ್ವನಿಯಲ್ಲಿ ಬದಲಾವಣೆಯಾಗುತ್ತದೆ. ರೋಗಾಣು ಇದ್ದ ಕಫ ನುಂಗಿದರೆ 'ಕರುಳಿನ ಕ್ಷಯ'ವೂ ಆಗಬಹುದು.

**ಪ್ರತಿಬಂಧಕೋಪಾಯಗಳು :**

ಸಣ್ಣ ಮಕ್ಕಳಲ್ಲಿ ಪುಪ್ಪುಸ ಕ್ಷಯುವು ಸಾಮಾನ್ಯವಾದರೂ ಕೂಡಾ, ಎಲುಬಿಗೆ ರೋಗ ತಗುಲಿದರೆ ಶರೀರದ ಅಂಗಾಂಗಗಳು ಊನವಾಗಬಹುದು. ಮಿದುಳಿಗೆ ತಗುಲಿದರೆ ಮಿದುಳ್ಬರೆಯುರಿತವು, ಮೂತ್ರಪಿಂಡಕ್ಕೆ ತಗುಲಿದರೆ ಅದಕ್ಕೂ ಶಾಶ್ವತ ಧಕ್ಕೆಯಾಗಬಹುದಾಗಿರುವದರಿಂದ ಚಿಕಿತ್ಸೆ ನೀಡಿದರೂ ತೊಂದರೆಯದೇ ಆಗಿರುವದರಿಂದ ಆದಷ್ಟು ರೋಗ ಬರದಂತೆ ಪ್ರತಿಬಂಧಕೋಪಾಯ ಕೈಕೊಳ್ಳುವದೇ ಲೇಸು.

ಮನೆಯಲ್ಲಿ ಅಥವಾ ಪಕ್ಕದ ಮನೆಯಲ್ಲಿ ಯಾರಿಗಾದರೂ ಕ್ಷಯವಿದ್ದರೆ ನಿಮ್ಮ ಮಕ್ಕಳನ್ನು ಅವರ ಸಮೀಪಕ್ಕೆ ಬಿಡಬೇಡಿರಿ. ರೋಗಿಯ ತಾಟು, ಲೋಟದಲ್ಲಿ ಮಗುವಿಗೆ ಆಹಾರ, ನೀರು ಹಾಕಿ ಕೊಡಬೇಡಿರಿ. ಆದಷ್ಟು ಮನೆಯ ಹಾಗೂ ಸುತ್ತಲಿನ ವಾತಾವರಣವನ್ನು ಸ್ವಚ್ಛವಾಗಿಡುವದು ಒಳ್ಳೆಯದು.

ಮಕ್ಕಳಿಗೆ ಸತ್ವಯುತ ಆಹಾರ, ಹಾಲು, ಹಣ್ಣು, ತತ್ತಿ ತಿನ್ನಲು ಕೊಡಬೇಕು. ಶುದ್ಧವಾದ ಹವೆಯಲ್ಲಿ ಮಕ್ಕಳನ್ನು ಆಡಲು ಬಿಡಬೇಕು.

ಮುಖ್ಯವಾಗಿ ಹುಟ್ಟಿದೊಡನೆ ಕ್ಷಯರೋಗ ಬರದಂತೆ ನಿಮ್ಮ ಮಗುವಿಗೆ ಬಿ. ಸಿ. ಜಿ. ಹಾಕಿಸಬೇಕು. ಇದು ಕುಷ್ಠ ರೋಗದ ವಿರುದ್ಧವೂ ರಕ್ಷಣೆ ನೀಡುತ್ತದೆ. ಬಿ.ಸಿ.ಜಿ.ಯನ್ನು ೨೦ ವರ್ಷದೊಳಗೆ ಬೇಕಾದಾಗ ಹಾಕಬಹುದಾದರೂ ಆದಷ್ಟು ಬೇಗನೆ ಹಾಕುವದು ಹಿತಕರ.

**ಪಾಲಕರಿಗೆ ಸೂಚನೆ :**

ನಿಮ್ಮ ಮಗುವಿಗೆ ೧೫ ದಿನಕ್ಕಿಂತ ಹೆಚ್ಚಿಗೆ ಕೆಮ್ಮು ಇದ್ದರೆ, ಸಾಯಂಕಾಲ ಜ್ವರ ಬರುತ್ತಿದ್ದರೆ, ಊಟ ಮಾಡದೇ ಇದ್ದರೆ ಮನೆಯಲ್ಲಿ ಯಾರಾದರೂ ಕ್ಷಯ ರೋಗಿಗಳಿದ್ದರೆ ನಿಮ್ಮ ಮಗುವನ್ನು ತಜ್ಞ ವೈದ್ಯರಲ್ಲಿ ಪರೀಕ್ಷೆ ಮಾಡಿಸಿ ಕ್ಷಯರೋಗ ದಿಂದ ಮುಕ್ತವಾಗಿರುವದೋ ಹೇಗೆ ಎಂದು ಖಚಿತಪಡಿಸಿ ಕೊಳ್ಳಿ.

೭

# ಭೇದಿ

ಒಂದು ಆಧಾರದ ಮೇಲೆ ಹೇಳುವದಾದರೆ ಮುಂದು ವರಿಯುತ್ತಿರುವ ರಾಷ್ಟ್ರಗಳಲ್ಲಿ ವರ್ಷಕ್ಕೆ ಸುಮಾರು ೧೫ ರಿಂದ ೨೦ ಮಿಲಿಯನ್ ಮಕ್ಕಳನ್ನು ಈ 'ಭೇದಿ' ಬಲಿ ತೆಗೆದುಕೊಳ್ಳು ತ್ತದೆ ಎಂಬುದನ್ನು ಗಮನಿಸಿದಾಗ ಇದರ ಭೀಕರತೆಯು ಅರಿವು ಆಗದಿರದು. ಮಕ್ಕಳನ್ನು ಮರಣಕ್ಕೆ ಗುರಿಪಡಿಸುವ ಮೊದಲು ಮೂರು ರೋಗಗಳಲ್ಲಿ ಭೇದಿಯೇ ಮುಖ್ಯ ಕಾರಣವಾಗಿದೆ. ಮೂರು ವರ್ಷದೊಳಗಿನ, ಅದರಲ್ಲಿಯೇ ಒಂದು ವರ್ಷದೊಳಗಿನ ಮಕ್ಕಳಿಗೆ ಇದೊಂದು ಮಾರಕ ಬೇನೆಯೇ ಸರಿ.

**ಭೇದಿಗೆ ಕಾರಣ :**

ಭೇದಿಯು ಒಂದು ತರದ ಸೂಕ್ಷ್ಮ ರೋಗಾಣುಗಳಿಂದ ಬರಬಹುದಾದರೂ ಪೌಷ್ಠಿಕ ಆಹಾರದ ಕೊರತೆ, ಹೊಲಸು ವಾತಾವರಣ, ಜನನಿಬಿಡ ಪ್ರದೇಶದ ಮಕ್ಕಳು ಸುಲಭವಾಗಿ ಇದಕ್ಕೆ ಬಲಿಯಾಗುತ್ತಾರೆ. ಕಾರಣ, ಭೇದಿ ಏನು ಮಹಾ ಎಂದು ಉದಾಸೀನತೆ ತಾಳಿದರೆ ಅದು ಅಪಾಯ ಮಾಡದೇ ಬಿಡದು.

**ರೋಗ ಪ್ರಸಾರ :**

ಭೇದಿ ಪ್ರಸಾರದಲ್ಲಿ ನೊಣಗಳು ಮಹತ್ವದ ಪಾತ್ರ ವಹಿಸುತ್ತವೆ. ರೋಗಾಣು ಉಳ್ಳ ಮಲದ ಮೇಲೆ ನೊಣಗಳು ಕುಳಿತಾಗ, ಅವುಗಳ ಕಾಲಿಗೆ, ದೇಹಕ್ಕೆ ರೋಗಾಣುಗಳು ಅಂಟಿ, ಅಂಥ ನೊಣವು, ತಿನ್ನುವ ಪದಾರ್ಥಗಳ ಮೇಲೆ, ಕಾಯಿಪಲ್ಲೆ, ನೀರಿನ ಮೇಲೆ ಕುಳಿತಾಗ ರೋಗಾಣುಗಳು ಅವುಗಳಲ್ಲಿ ಸೇರುತ್ತವೆ. ಈ ರೋಗಾಣು ಹತ್ತಿದ ಆಹಾರಪದಾರ್ಥ ತಿನ್ನುವದಾಗಲಿ, ಕುಡಿಯುವದಾಗಲಿ ಮಾಡಿದರೆ ಆರೋಗ್ಯವಂತರಿಗೆ ಭೇದಿ ಹತ್ತುವದು. ಚಿಕ್ಕಮಕ್ಕಳಂತೂ ಹೊಲಸು ಪದಾರ್ಥಗಳನ್ನು, ಮಲವನ್ನು ಕೈಯಿಂದ ಹಿಡಿದು ಅದನ್ನೇ ಬಾಯಲ್ಲಿ ಇಟ್ಟುಕೊಳ್ಳುವದು ಸಾಮಾನ್ಯ. ಇದರಿಂದ ತೀವ್ರವಾಗಿ ರೋಗ ಪ್ರಸಾರವಾಗುತ್ತದೆ.

ಕೆಲವು ಭೇದಿ ರೋಗಪೀಡಿತರಿಗೆ, ರೋಗಾಣುಗಳು ಮಲದಲ್ಲಿ ಹೋಗುತ್ತಿದ್ದರೂ ರೋಗದ ಯಾವ ತೊಂದರೆಯೂ ಹೊರಗೆ ಕಾಣದು. ಅಂಥ ವ್ಯಕ್ತಿಯು ಅಡಿಗೆ ಮಾಡುವ ಕಾರ್ಯದಲ್ಲಿ ತೊಡಗಿದರೆ ಸುಲಭವಾಗಿಯೇ ರೋಗ ಪ್ರಸಾರವಾಗುತ್ತದೆ.

**ಭೇದಿಯ ಲಕ್ಷಣಗಳು :**

ಮೊದಮೊದಲು ಸಾವಕಾಶವಾಗಿ ಹೊಟ್ಟೆ ಮುರಿದು, ಕಸಿವಿಸಿಯಾಗುವದರೊಂದಿಗೆ ಹೊಟ್ಟೆ ಮುರಿತ ತೀವ್ರವಾಗುತ್ತದೆ. ನೋವು ಹೊಕ್ಕಳ ಸುತ್ತಲೂ ಆವರಿಸುವದಲ್ಲದೆ

ಮೇಲಿಂದ ಮೇಲೆ ಭೇದಿ ಮಾಡುವ ಇಚ್ಛೆಯಾಗುತ್ತದೆ. ಮೊದಲು ದಿನಕ್ಕೆ ೪ ರಿಂದ ೫ ಸಲ ಭೇದಿಯಾದರೆ ಒಂದೆರಡು ದಿನಗಳ ನಂತರ ೧೦ ರಿಂದ ೧೨ ಸಲವಾಗುತ್ತದೆ. ಮಲದ ಬಣ್ಣ ಹಳದಿ ನೀರಿನಂತಿದ್ದು ನಂತರದಲ್ಲಿ ರಕ್ತಮಿಶ್ರಿತ ಕೇಪು ಬಣ್ಣದ್ದಾಗುತ್ತದೆ. ರಕ್ತದೊಂದಿಗೆ ಅವು (ಮಲವು) ಬೀಳ ಬಹುದು.

ಮಲವಿಸರ್ಜನೆ ಮಾಡುವಾಗ ಗುದನಾಳ ಉರಿದು ಮಗು ಒದ್ದಾಡುತ್ತದೆ. ನಿಃಶಕ್ತಿಯಿಂದ ಮಗುವು ಸುಮ್ಮನೇ ಮಲಗು ತ್ತದೆ. ಸಣ್ಣಾಗಿ ಜ್ವರ, ತಲೆನೋವು, ಹಸಿವು ಇಲ್ಲವಾಗಿ. ಏನನ್ನೂ ತಿನ್ನದು. ನೀರಡಿಸಿ ಆಗಾಗ್ಗೆ ನೀರು ಕುಡಿಯುತ್ತದೆ ಚಳಿ ಹತ್ತಿ ನಡಗಲೂಬಹುದು. ನಾಲಿಗೆಯು ಮೇಲೆ ಹೊಲಸು ಹೊದಿಕೆ ಕೂಡ್ರಬಹುದು. ಜ್ವರ ಹೆಚ್ಚಾಗಬಹುದು. ಮಗು ವಿನ ಹೊಟ್ಟೆ ಹಿಡಿದರೆ ನೋವಿನಿಂದ ಅಳುತ್ತದೆ. ಮಲವು ದುರ್ನಾತದಿಂದ ಕೂಡಿರುತ್ತದೆ.

### ಭೇದಿಯ ತೊಂದರೆಗಳು :

ಭೇದಿ ಹಾಗೂ ವಾಂತಿಯಿಂದಾಗಿ ದೇಹದಲ್ಲಿ ನೀರಿನ ಅಂಶವು ಕಡಿಮೆ ಆಗಿ ಗಲ್ಲ ಒಳಹೋಗಿ, ಕಣ್ಣು ಗುದ್ದು ಸೇರಿ, ನಾಲಿಗೆ ತುಟಿ ಒಣಗುತ್ತದೆ. ಚರ್ಮವು ಕೂಡಾ ಒಣಗುತ್ತದೆ. ಕರುಳಿನಲ್ಲಿ ರಕ್ತಸ್ರಾವವಾಗಬಹುದು. ಗುದನಾಳ ಹೊರಬರ ಬಹುದು. ರೋಗ ಮುಂದುವರೆದಂತೆ ಮೂತ್ರ ಕಟ್ಟಾಗುತ್ತದೆ. ಇದು ಅಪಾಯದ ಸಂಕೇತವಾಗಿದೆ.

**ಪಾಲಕರಿಗೆ ಸೂಚನೆ:**

ಮಕ್ಕಳಿಗೆ ಭೇದಿ ಹತ್ತಿದಾಗ ಖಾರದ, ಎಣ್ಣೆಯ ಹಾಗು ಬಿರುಸಾದ, ಗಟ್ಟಿ ಪದಾರ್ಥಗಳನ್ನು ತಿನ್ನಲು ಕೊಡಬಾರದು. ಆದಷ್ಟು ದ್ರವ ಪದಾರ್ಥಗಳಾದ ಹಾಲು, ನೀರು, ಮಜ್ಜಿಗೆ, ಎಳೆ ನೀರು, ಸಾಬುಅಕ್ಕಿ ಗಂಜಿ, ನೀರಿನಲ್ಲಿ ಗ್ಲುಕೋಜ ಇಲ್ಲವೆ ಸಾದಾ ಸಕ್ಕರೆ, ಸ್ವಲ್ಪ ತಿನ್ನುವ ಸೋಡಾ ಹಾಗೂ ಉಪ್ಪು ಹಾಕಿ ಆಗಾಗ್ಗೆ ಕುಡಿಸಬೇಕು. ರೋಗಪೀಡಿತ ಮಗುವಿನ ಲೋಟ, ತಾಟು, ಇತರ ಮಕ್ಕಳು ಉಪಯೋಗಿಸದಂತೆ ಎಚ್ಚರಿಕೆ ವಹಿಸಬೇಕು. ಮಗುವಿನ ಮಲವನ್ನು ಮಕ್ಕಳಾಡದ ಸ್ಥಳದಲ್ಲಿ ಚೆಲ್ಲಬೇಕು.

**ನೆನಪಿನಲ್ಲಿಡಿ:**

೧. ಭೇದಿಯು ಮಕ್ಕಳ ಒಂದು ಅಪಾಯಕಾರಿ ರೋಗ.

೨. ಭೇದಿಯು ಅಂಟುರೋಗವಾಗಿರುವದರಿಂದ ಆರೋಗ್ಯವಂತ ಮಕ್ಕಳನ್ನು ರೋಗಪೀಡಿತ ಮಗುವಿನಿಂದ ದೂರವಿಡಬೇಕು.

೩. ಮಕ್ಕಳು ಉಪಯೋಗಿಸುವ ಹಾಲಿನ ಬಾಟ್ಲಿ, ರಬ್ಬರಿನ ಮೊಲೆತುಂಬು, ಲೋಟಗಳನ್ನು ಚೆನ್ನಾಗಿ ತೊಳೆಯಬೇಕು.

೪. ರೋಗಪೀಡಿತ ಮಗುವಿಗೆ ದ್ರವ ಆಹಾರ ಹಾಗೂ ಸಕ್ಕರೆ, ಉಪ್ಪು, ತಿನ್ನುವ ಸೋಡಾ ಬೆರೆಸಿದ ನೀರನ್ನು ಸಾಕಷ್ಟು ಕೊಡಬೇಕು.

೫. ಮನೆಯ ಸುತ್ತಲೂ ನೊಣಗಳಾಗದಂತೆ ಎಚ್ಚರಿಕೆ ವಹಿಸಬೇಕು.

೬. ಎಷ್ಟೇ ಸೌಮ್ಯ ಸ್ವರೂಪದ ಭೇದಿಯಿಂದ ನಿಮ್ಮ ಮಗು ತೊಂದರೆಪಡಲಿ, ವೈದ್ಯರ ಸಲಹೆ ಪಡೆಯುವದನ್ನು ಮರೆಯಬಾರದು.

೮

# ಗೊಬ್ಬರ (ದಡಾರ)

ಸಾಮಾನ್ಯವಾಗಿ ಎಲ್ಲರೂ ತಿಳಿದಿರುವುದು ಗೊಬ್ಬರವು ಒಂದು ಅಪಾಯರಹಿತ ರೋಗವೆಂದು. ಜೀವನದಲ್ಲಿ ಒಮ್ಮೆಲ್ಲ ಒಮ್ಮೆಯಾದರೂ ಪ್ರತಿಯೊಬ್ಬರಿಗೂ ಇದು ಬಂದು ಹೋಗುತ್ತದೆಂದು. ಒಮ್ಮೆ ಬಂದರೆ ಶರೀರದಲ್ಲಿ ರೋಗಪ್ರತಿಬಂಧಕ ಶಕ್ತಿ ಕೊನೆಯವರೆಗೂ ಉಳಿಯುವದರಿಂದ ಇದು ಪುನರಪಿ ಆಗುವದು ಬಹಳೇ ಅಪರೂಪ. ಸಾಮಾನ್ಯವಾಗಿ ಹುಟ್ಟಿದ ೬ ತಿಂಗಳೊಳಗೆ ಇದು ಬಾರದು.

ಮಾರಕ ರೋಗದಲ್ಲಿ ಮೊದಲ ಸ್ಥಾನ:— ಮಕ್ಕಳಿಗೆ ಬರುವ ಆರು ಪ್ರಮುಖ ರೋಗಗಗಳಲ್ಲಿ ಮೊದಲನೆಯ ಸ್ಥಾನ ಗೊಬ್ಬರಕ್ಕಿದೆ. ಎರಡನೆಯದು ನಾಯಿಕೆಮ್ಮು. ಅನೇಕ ದೇಶಗಳಲ್ಲಿ ಅದರಲ್ಲಿಯೇ ಬೆಳೆಯುತ್ತಿರುವ ದೇಶಗಳಲ್ಲಿ ಹೆಚ್ಚಿನಸಂಖ್ಯೆಯಲ್ಲಿ ಮಕ್ಕಳ ಮರಣಕ್ಕೆ ಗೊಬ್ಬರವೇ ಕಾರಣವಾಗಿದೆ.

**ರೋಗಕ್ಕೆ ಕಾರಣ:**

ರೋಗಕ್ಕೆ ಮೂಲ ಕಾರಣವೆಂದರೆ ವಿಷಾಣುಗಳು. ಕಣ್ಣಿಗೆ ಕಾಣದಷ್ಟು ಇವು ಸೂಕ್ಷ್ಮವಾಗಿವೆ. ಗೊಬ್ಬರವು ಬಹು ತೀವ್ರ ಸೋಂಕಿನ ರೋಗವಾಗಿದೆ.

## ಯಾರಿಗೆ ಈ ರೋಗ ಸುಲಭವಾಗಿ ಅಂಟುತ್ತದೆ ?

ಜನನಿಬಿಡ ಪ್ರದೇಶದಲ್ಲಿರತಕ್ಕ, ಸ್ವಚ್ಛತೆ ಕಡಿಮೆ ಇರುವ, ಸತ್ವಯುತ ಆಹಾರದ ಕೊರತೆಯಿರುವ ಮಕ್ಕಳಿಗೆ ಸಹಜವಾಗಿಯೇ ಇದು ಅಂಟುತ್ತದೆ.

## ರೋಗದ ಪ್ರಸಾರ :

ರೋಗಪೀಡಿತ ಮಕ್ಕಳು ಸೀತರೆ, ಕೆಮ್ಮಿದರೆ, ಮಾತನಾಡಿದರೆ, ಉಸಿರಾಡಿಸಿದರೆ, ರೋಗದ ವಿಷಾಣುಗಳು ವಾತಾವರಣ ಸೇರುತ್ತವೆ. ಅಂಥ ಹವೆಯನ್ನೇ ಇತರೇ ನಿರೋಗಿ ಮಕ್ಕಳು ಉಸಿರಾಡಿಸಿದರೆ ಅದಕ್ಕೆ ತಗಲುತ್ತದೆ. ಹಾಗೂ ರೋಗಿಯ ತಾಟು, ನೀರಿನ ಲೋಟ, ಅರಿವೆ, ವಸ್ತ್ರಗಳಿಂದಲೂ ಪ್ರಸಾರವಾಗಬಹುದು.

## ರೋಗದ ಲಕ್ಷಣಗಳು :

ಸಾಮಾನ್ಯವಾಗಿ ವಿಷಾಣುಗಳು ಮಗುವಿನ ದೇಹ ಸೇರಿದ ೧೦ ದಿನಗಳ ನಂತರ ರೋಗದ ಲಕ್ಷಣಗಳು ಕಂಡುಬರುತ್ತವೆ. ಮೊದಲ ಲಕ್ಷಣವಾಗಿ ಮಗುವಿಗೆ ವಿಪರೀತ ಶೀನು, ನೆಗಡಿ ವಾಂತಿ ಭೇದಿ ಹತ್ತುತ್ತದೆ. ೧೦೧ ರಿಂದ ೧೦೨ರ ವರೆಗೂ ಜ್ವರ ಇದ್ದು ದಿನಕ್ಕೂ ಹೆಚ್ಚುತ್ತಾ ಹೋಗುತ್ತವೆ. ಆಗ ಒಣ ಕೆಮ್ಮು, ಗಂಟಲ ಕೆರೆತ, ಕೆಂಪಾದ ಕಣ್ಣು, ರೆಪ್ಪೆಬಾವು, ಕಣ್ಣಲ್ಲಿ ನೀರು ಬರುವದು, ಬಿಸಿಲು ಹಾಗೂ ಬೆಳಕಿಗೆ ಕಣ್ಣು ಕುಕ್ಕಿ ನೋಯುತ್ತವೆ. ಯಾವತ್ತೂ ಬಿಸಿ ಉಸಿರು ಬರುತ್ತದೆ.

**ರೋಗದ ವಿಶೇಷ ಲಕ್ಷಣ :**

ಅಂಗಳು ಮತ್ತು ಗಂಟಲದಲ್ಲಿ ಬೊಕ್ಕೆಗಳು ಏಳುವುದು ವಿಶೇಷ ಲಕ್ಷಣಗಳಾಗಿವೆ. ಈ ಬೊಕ್ಕೆಗಳ ಮಧ್ಯಭಾಗವು ದಟ್ಟ ಕೆಂಪು ಇದ್ದು ಸುತ್ತಲೂ ತಿಳಿನೀಲಿ ಇರುತ್ತದೆ. ಇದಾದ ನಂತರ ಬೊಕ್ಕೆಗಳು ಮೈಮೇಲೆ ಏಳುತ್ತವೆ. ಕಾರಣ ಗೊಬ್ಬರ ಬರುವದನ್ನು ಅಂಗಳು ಹಾಗೂ ಗಂಟಲನ್ನು ನೋಡಿ ಮೊದಲೇ ಗುರುತಿಸಬಹುದು.

ಜ್ವರ ಬಂದ ೪–೫ ದಿನಕ್ಕೆ ಹಣೆ, ಕಿವಿಸಂದುಗಳ ಹಿಂದೆ, ತಾಮ್ರ ವರ್ಣದ ಕೆಂಪು ಬೊಕ್ಕೆಗಳು ಪ್ರಾರಂಭವಾದೊಡನೆ ಜ್ವರ ಕಡಿಮೆ ಆಗುತ್ತ ಬರುತ್ತವೆ. ಒಂದು ವಾರದೊಳಗೆ ಜ್ವರ ಇಲ್ಲವಾಗಿ ಬೊಕ್ಕೆಗಳು ಮಾಯವಾಗುತ್ತವೆ. ಕಲೆಯೂ ಇರುವುದಿಲ್ಲ.

ಗೊಬ್ಬರದಿಂದಾಗುವ ತೊಂದರೆಗಳು : ಸಾಮಾನ್ಯವಾಗಿ ಗೊಬ್ಬರವು ಯಾವುದೇ ದುಷ್ಪರಿಣಾಮ ಮಾಡದೇ ಹೋದರೂ ಕೆಲವೊಮ್ಮೆ ಕಿವಿ ಸೋರುವದು, ಭೇದಿ, ವಾಂತಿ, ಹುದುಗಿದ ಕ್ಷಯ ಎದ್ದು ಕಾಣುವದು. ಪುಪ್ಪುಸ ರೋಗಗಳಾದ ನಿಮೋನಿಯಾ, ದಮ್ಮು, ಮೆದುಳುರಿತ ಕ್ಷಚಿತವಾಗಿ ಸೆಳವು, ಪಾರ್ಶ್ವ ವಾಯುವಿಗೆ ಕಾರಣವಾಗಬಹುದು. ಮಗುವಿನಲ್ಲಿ 'ಎ' ಜೀವ ಸತ್ವದ ಅಭಾವವಿದ್ದರೆ ಕುರುಡುತನಕ್ಕೂ ಎಡೆಯಾಗುತ್ತದೆ.

**ಪ್ರತಿಬಂಧಕೋಪಾಯುಗಳು:**

ಗೊಬ್ಬರವು ತೀವ್ರತರದ ಸೋಂಕು ರೋಗವಾಗಿದ್ದರಿಂದ ನಿರೋಗಿ ಮಕ್ಕಳನ್ನು ರೋಗಪೀಡಿತ ಮಗುವಿನ ಹತ್ತಿರ ಆಟ ವಾಡಲು ಬಿಡಬಾರದು. ರೋಗಿಯು ಉಪಯೋಗಿಸಿದ ಎಂಜಲು ತಿನಿಸುಗಳನ್ನು, ಅರಿವೆ, ತಾಟು, ನೀರಿನ ಲೋಟ, ಉಪಯೋಗಿಸಬಾರದು. ಕನಿಷ್ಠ ಒಂದು ವಾರದವರೆಗೆ ನಿರೋಗಿ ಮಕ್ಕಳು ರೋಗಪೀಡಿತ ಮಗುವಿನಿಂದ ದೂರವಿರಬೇಕು. ಇಲ್ಲಿಯುವರೆಗೆ ಗೊಬ್ಬರ ಪ್ರತಿಬಂಧಿಸುವ ಲಸಿಕೆ ನಮ್ಮಲ್ಲಿ ಲಭ್ಯ ವಿರದ ಕಾರಣ ಪ್ರತಿಬಂಧಕೋಪಾಯ ಅಷ್ಟೊಂದು ಯಶಸ್ವೀ ಆಗಿಲ್ಲವೆಂದು ಹೇಳಬಹುದು. (ಆದರೆ ಈಗ ಲಭ್ಯವಿದೆ)

**ಪಾಲಕರಿಗೆ ಸೂಚನೆ:**

ಗೊಬ್ಬರ ರೋಗವು ಯಾವುದೇ ಔಷಧೋಪಚಾರವಿಲ್ಲದೇ ಗುಣವಾಗಬಹುದಾದರೂ ಅದರಿಂದಾಗುವ ತೊಂದರೆಗಳನ್ನು ತಡೆಗಟ್ಟಲು ವೈದ್ಯರ ಸಲಹೆ ಪಡೆಯುಲೇಬೇಕು.

**ಮೂಢನಂಬಿಕೆ ಅಪಯುಕಾರಿ:**

ಗೊಬ್ಬರ ಬರಲು ದೇವಿಯೇ ಕಾರಣವೆಂದು ಯಾವುದೇ ಔಷಧೋಪಚಾರ ಮಾಡಿಸದೇ ಮೂಢನಂಬಿಕೆಯಲ್ಲಿಯೇ ದೇವಿಗೆ 'ದೀಪ ಹಾಕಿಸುವ' ವಿಧಾನವು ಹಿತಕಾರಿಯಲ್ಲ.

೬

# ರೋಗ ಪ್ರತಿಬಂಧಕೋಪಾಯಗಳು

"Prevention is better than cure" ಎಂಬಂತೆ ರೋಗ ಬಂದ ನಂತರ ಗುಣಪಡಿಸಲು ತೊಂದರೆಪಡದೇ ರೋಗ ಬರದಂತೆ ತಡೆಯುವುದೇ ಮಹತ್ವದ ಅಂಶವಾಗಿದೆ.

ಮಕ್ಕಳ ಆರೋಗ್ಯವು ಜೀವನವಿಡಿ ಉತ್ತಮವಾಗಿರ ಬೇಕಾದರೆ ಅವರಿಗೆ ರೋಗ ಪ್ರತಿಬಂಧಕ ಲಸಿಕೆ ಹಾಕುವ ವಿಧಾನವು ಶ್ರೇಷ್ಠವಾದುದು. ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ಈ ಲಸಿಕೆಯು ಒಂದು ವರದಾನವೇ ಸರಿ. ನಮ್ಮ ದೇಶದಲ್ಲೂ ಈ ಲಸಿಕೆ ಹಾಕುವ ವಿಧಾನವು ವ್ಯಾಪಕವಾಗಿ ನಡೆದಿದ್ದರೂ ಇನ್ನೂ ಜನತೆಯು ಸಂಪೂರ್ಣವಾಗಿ ಇದರ ಲಾಭ ಪಡೆಯು ಲೊಲ್ಲರು. ಈ ಲಸಿಕೆಯಿಂದ ಮಕ್ಕಳ ಮಾರಕ ರೋಗಗಳನ್ನು ಸಂಪೂರ್ಣವಾಗಿ ತಡೆಗಟ್ಟುವದು ಸುಲಭ ಸಾಧ್ಯ.

ಇಂದು ಮಕ್ಕಳನ್ನು ಬಲಿ ತೆಗೆದುಕೊಳ್ಳುತ್ತಿರುವ ಪ್ರಮುಖ ವಾದ ಮಾರಕ ರೋಗಗಳು ೬ ಇದ್ದು ಅವುಗಳು : ಪೋಲಿಯೋ ಡಿಫ್ತೀರಿಯಾ, ನಾಯಿಕೆಮ್ಮು, ಧನುರ್ವಾಯು, ಗೊಬ್ಬರ (ದಡಾರ) ಹಾಗೂ ಕ್ಷಯ.

ಒಂದು ಸಮೀಕ್ಷೆಯ ಪ್ರಕಾರ ಜಗತ್ತಿನಲ್ಲಿ ಪ್ರತಿವರ್ಷ ಸುಮಾರು ೫೦ ಲಕ್ಷಕ್ಕೂ ಹೆಚ್ಚು ಮಕ್ಕಳು ಈ ಸೋಂಕು ರೋಗಗಳಿಗೆ ತುತ್ತಾಗುತ್ತಿದ್ದಾರೆ. ಈ ಸೋಂಕು ರೋಗ ಗಳಿಂದ ಮಗು ಮರಣ ಹೊಂದುವದು ಇಲ್ಲವೆ ಬೌದ್ಧಿಕ ಹಾಗು ದೈಹಿಕ ಊನಕ್ಕೆ ಬಲಿಯಾಗಬಹುದು. ಮೆದುಳಿಗೆ ಧಕ್ಕೆ, ಕಿವುಡುತನ, ಅಂಧತ್ವ, ಪಾರ್ಶ್ವವಾಯುವಿಗೂ ಕಾರಣವಾಗ ಬಹುದು.

ಲಸಿಕೆಯ ವಿಧಾನವು ಮಗುವು ತಾಯಿಯ ಗರ್ಭದಲ್ಲಿ ಇದ್ದಾಗಲೇ ಪ್ರಾರಂಭವಾಗಬೇಕು. ಈ ಕಾರಣದಿಂದಲೇ ಹುಟ್ಟಿ ದೊಡನೆ ಮಗುವಿಗೆ ಹಾಗೂ ಹೆರಿಗೆಯ ಸಮಯದಲ್ಲಿ ಮಹಿಳೆಗೆ ಧನುರ್ವಾಯು ರೋಗ ಬರದಂತೆ ಗರ್ಭಿಣಿ ಮಹಿಳೆಗೆ ಟಿಟ್ಯಾನಸ್ ಟಾಕ್ಸೈಡ್ ಹಾಕಲಾಗುವದು.

ಸಾಮಾನ್ಯವಾಗಿ ಮಗುವು ಹುಟ್ಟಿದೊಡನೆ ಪ್ರಾರಂಭ ವಾದ ಲಸಿಕೆ ವಿಧಾನವು ಎಲ್ಲ ಸೋಂಕು ರೋಗಗಳ ವಿರುದ್ಧ ರಕ್ಷಣೆ ಪಡೆಯಬೇಕಾದರೆ ೧೦ ರಿಂದ ೧೨ ವರ್ಷದ್ದು ಆಗಿರು ತ್ತದೆ.

## ಲಸಿಕೆ ಹಾಕುವ ಕ್ರಮ

| | ಮಗುವಿನ ವಯಸ್ಸು | ಯಾವ ರೋಗದ ವಿರುದ್ಧ | ಯಾವ ಲಸಿಕೆ |
|---|---|---|---|
| ೧) | ಮಗು ಹುಟ್ಟಿದ ೧ ರಿಂದ ೨ ತಿಂಗಳಲ್ಲಿ | ಮೈಲಿ ಬೇನೆ, ಕ್ಷಯ | ಮೈಲಿಬೇನೆ ಲಸಿಕೆ ಬಿ.ಸಿ.ಜಿ. |
| ೨) | ಮಗುವಿನ ೩, ೪ ಮತ್ತು ೫ ನೇ ತಿಂಗಳಲ್ಲಿ (೩ ಸಾರಿ) | ಪೋಲಿಯೋ ತ್ರಿರೋಗ | ಪೋಲೀಯೋ ಲಸಿಕೆ, ತ್ರಿಸಂಯೋಜಕ ಚುಚ್ಚುಮದ್ದು |
| ೩) | ಮಗುವಿನ ೧॥ ವರ್ಷದಿಂದ ೨ ವರ್ಷದಲ್ಲಿ | ಪೋಲಿಯೋ ತ್ರಿರೋಗ | ವರ್ಧಕ ಲಸಿಕೆ ವರ್ಧಕ ಚುಚ್ಚುಮದ್ದು |
| ೪) | ಮಗುವಿನ ೫ ರಿಂದ ೬ನೇ ವರ್ಷದಲ್ಲಿ | ವಿಷಮಜ್ವರ, ಕಾಲರಾ, ಡಿಫ್ತೀರಿಯಾ, ಧನುರ್ವಾಯು, ಮೈಲಿ ಬೇನೆ | ಟಿ. ಎ. ಬಿ. ಹಾಗೂ ಕಾಲರಾ ಲಸಿಕೆ ಚುಚ್ಚುಮದ್ದಿನ ರೂಪದಲ್ಲಿ ಪುರುಲಸಿಕೆ |
| ೫) | ಮಗುವಿನ ೧೦ ರಿಂದ ೧೫ನೇ ವರ್ಷದಲ್ಲಿ | ವಿಷಮಜ್ವರ ಡಿಫ್ತೀರಿಯಾ ಧನುರ್ವಾಯು | ಟಿ.ಎ.ಬಿ. ಚುಚ್ಚುಮದ್ದು ದ್ವಿಸಂಯೋಗ ಚುಚ್ಚುಮದ್ದು |

ಸೂಚನೆ :– ೧) ಬಿ.ಸಿ.ಜಿ. ಲಸಿಕೆಯು ಕ್ಷಯ ಹಾಗು ಕುಷ್ಠ ರೋಗದ ವಿರುದ್ಧವೂ ರಕ್ಷಣೆ ನೀಡುತ್ತದೆ.

೨) ಗೊಬ್ಬರದ ವಿರುದ್ಧ ಲಸಿಕೆಯು ಈಗ ನಮ್ಮ ದೇಶದಲ್ಲಿ ಲಭ್ಯವಿದೆ.

ಈ ವರೆಗೂ ವಿವರಿಸಿದ ಲಸಿಕೆಗಳಲ್ಲದೆ ಕಾಲರಾ, ವಿಷಮ ಜ್ವರ, ಮೈಲಿಬೇನೆ ಪಿಡುಗಿನ ರೂಪದಲ್ಲಿ ಬಂದಾಗ ಇವನ್ನು ಎಲ್ಲರಿಗೂ ಚುಚ್ಚುಮದ್ದನ್ನು ಕೊಡಿಸಬೇಕು.

ಸಾಮಾನ್ಯವಾಗಿ ಪ್ರತಿ ೩ ವರ್ಷಕ್ಕೊಮ್ಮೆ ಮೈಲಿಬೇನೆ ವಿರುದ್ಧ, ಪ್ರತಿ ೬ ತಿಂಗಳಿಗೊಮ್ಮೆ ಕಾಲರಾ ಹಾಗು ವಿಷಮ ಜ್ವರ ವಿರುದ್ಧ, ಪ್ರತಿ ೬ ತಿಂಗಳಿಗೊಮ್ಮೆ ಧನುರ್ವಾಯು ವಿರುದ್ಧ ಹಾಗು ನಾಯಿ, ನರಿ, ಬೆಕ್ಕು, ತೋಳ, ಇಲಿ ಕಡಿದಾಗಲೂ ಎ. ಆರ್. ವಿ. ಹಾಕಿಸಬೇಕು.

**ಲಸಿಕೆಯ ಸೌಲಭ್ಯವಿರುವ ಸ್ಥಳಗಳು :**

ದೇಶದ ಎಲ್ಲ ಸರಕಾರಿ, ಕಾರ್ಪೊರೇಶನ್, ಮುನಸಿಪಾಲಿಟಿ, ದವಾಖಾನೆಗಳಲ್ಲಿ ಈ ಸೌಲಭ್ಯ ಲಭ್ಯವಿದ್ದು ಕೆಲವು ಸಾರ್ವಜನಿಕ ಸೇವಾ ಸಂಸ್ಥೆಗಳು, ರೋಟರಿ, ಲಯನ್ಸ ಮುಂತಾದ ಕ್ಲಬ್ಬುಗಳು ಈ ಸೇವೆ ಒದಗಿಸುತ್ತವೆ.

ಹಲವು ಖಾಸಗಿ ವೈದ್ಯರೂ ಈ ಲಸಿಕೆಯನ್ನು ಕೊಡುತ್ತಾರೆ. ಸಾರ್ವಜನಿಕರು ಪ್ರಯೋಜನ ಪಡೆಯುವದು ಅವರ ಕರ್ತವ್ಯವಾಗಿದೆ.

೧೦

## ಮೂಢನಂಬಿಕೆಗಳು ಹಾಗೂ ಮಕ್ಕಳ ಕಾಯಿಲೆಗಳು

ಭಾರತವು ಮೂಢನಂಬಿಕೆಗಳ ತವರುಮನೆ. ಇಂದಿನ ವಿಜ್ಞಾನ ಯುಗದಲ್ಲಿ ಸಹಜವಾಗಿಯೇ ಯಾವುದನ್ನು ವಿಚಾರ ಮಾಡದೇ ನಂಬುವ ಸ್ವಭಾವ ನಮ್ಮ ಭಾರತೀಯರದ್ದಾಗಿರು ವದರಿಂದಲೇ ಪಾಲಕರ "ಮೂಢನಂಬಿಕೆ"ಯಿಂದಾಗಿ ಲಕ್ಷಾನು ಗಟ್ಟಲೇ ಮಕ್ಕಳು ಜೀವ ಕಳೆದುಕೊಳ್ಳುತ್ತಿದ್ದಾರೆ.

ಹಿಂದೆ ವೈದ್ಯ ವಿಜ್ಞಾನವು ಅಷ್ಟು ಪ್ರಗತಿ ಸಾಧಿಸಿದ್ದಿಲ್ಲ. ಹಾಗೂ ಜನ ಸಾಮಾನ್ಯರಿಗೆ ವೈದ್ಯಕೀಯ ಸೌಕರ್ಯಗಳೂ ಸುಲಭವಾಗಿ ನಿಲುಕದ ಕಾರಣ ರೋಗ ರುಜಿನಗಳು ಬಂದಾಗ ಯಾವುದೇ ರೀತಿಯಿಂದಲಾದರೂ, ಏನಾದರೂ ಮಾಡಿ ಯಾದರೂ ರೋಗ ಗುಣವಾದರೆ ಸಾಕೆಂದು ಮೂಢನಂಬಿಕೆ ಯಂತಹ ಹಲವು ವಿಧಾನಗಳನ್ನು ಅನುಸರಿಸುತ್ತಿದ್ದರು.

ಆದರೆ ಇಂದು ವೈದ್ಯ ವಿಜ್ಞಾನದಲ್ಲಿ ಸಾಕಷ್ಟು ಸಂಶೋ ಧನೆಗಳಾಗಿದ್ದು ಪ್ರತಿಯೊಂದು ರೋಗ ಬರಲು ರೋಗಾಣು ಗಳೇ ಕಾರಣವೆಂದೂ, ಆ ರೋಗ ಬಂದರೆ ಯಾವ ಔಷಧಿ ಉಪಯೋಗಿಸಬೇಕೆಂದೂ ನಿಶ್ಚಿತವಾಗಿ ಸಿದ್ಧವಾಗಿದ್ದನ್ನು

ವಿಜ್ಞಾನವು ದೇಶದ ಜನತೆಗೆ ಸಾರಿ ಸಾರಿ ಹೇಳುತ್ತಿದ್ದರೂ ಇನ್ನೂ ಅನೇಕರು ಅದರತ್ತ ಕಿವಿಗೊಡದೇ ಅಜ್ಞಾನದಲ್ಲಿಯೇ ತಮ್ಮ ಮೇಲೆ ಆದ ಮೂಢನಂಬಿಕೆಯ ವಿಧಾನಗಳನ್ನು ಮುಂದುವರಿಸುತ್ತಿರುವುದು ಶೋಚನೀಯ.

ಪ್ರಚಲಿತವಿರುವ ಇಂದಿನ ಮೂಢನಂಬಿಕೆಯ ವಿಧಾನಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಣೆ ಮಾಡಿದಾಗ ಆಗುವ ಹಾನಿಯೇ ಅಪಾರ ! ಈ ಮೂಢನಂಬಿಕೆಯ ವಿಧಾನಗಳನ್ನು ಹೀಗೆಯೇ ಮುಂದುವರಿಯಲು ಬಿಟ್ಟರೆ ಜನರ ಆರೋಗ್ಯ ಎಂದು ಸುಧಾರಿಸಬೇಕು ? ಆರೋಗ್ಯವಂತ ಸಮಾಜ ಎಂದು ನಿರ್ಮಾಣವಾಗಬೇಕು ? ಬುದ್ಧಿಜೀವಿಗಳಿಗೆ, ಸಮಾಜ ಸುಧಾರಕರಿಗೆ ಇದೊಂದು ಚಿಂತೆಯಾಗಿದೆ.

### ರೋಗ–ಶಾಪದ ಫಲವೇ?

ರೋಗಗಳು ಬರುವುದು 'ಶಾಪ'ದ ಅಥವಾ 'ಪಾಪ'ದ ಫಲದಿಂದ ಎಂದು ತಿಳಿದು ಅವುಗಳ ನಿವಾರಣೆಗಾಗಿ ಉಪವಾಸ ವ್ರತ ಆಚರಿಸುವುದರೊಂದಿಗೆ ರೋಗಕ್ಕೆ ಕಾರಣವಾದ ದೇವತೆಯನ್ನು ದೇವನನ್ನು ಸಂತೈಸಲೂ ಕುರಿ–ಕೋಳಿ ಮುಂತಾದ ಜೀವಿಗಳನ್ನು ಬಲಿ ಕೊಡುವದು; ರಸ್ತೆಗಳು ಒಂದನ್ನೊಂದು ಕೂಡುವ ಪ್ರದೇಶದಲ್ಲಿ ರಾತ್ರಿ ಇಲ್ಲವೆ ಅಮಾವಾಸ್ಯೆಯ ದಿನ ಹೊಸ ಮಣ್ಣಿನ ಮಡಿಕೆಯಲ್ಲಿ ನಿಂಬೆಹಣ್ಣು, ಬಾಳೆಹಣ್ಣು, ಅರಿಸಿನ, ಕುಂಕುಮ, ತಿನ್ನುವ ವಸ್ತುಗಳನ್ನು ಹಾಕಿ ಇಡುತ್ತಾರೆ. ಇವನು ದಾಟಿದ ವ್ಯಕ್ತಿಗೆ ಅಥವಾ ಮಕ್ಕಳಿಗೆ ರೋಗದಿಂದ ಬಳಲುವವನ ರೋಗವು ಅಂಟುವದೆಂಬ ಭ್ರಮೆ ಬೇರೆ ಇರುತ್ತದೆ.

ಕಂಡ ಕಂಡ ದೇವರಿಗೆ ಕೈಮುಗಿದು, ಗಿಡಗಳ ಪ್ರದಕ್ಷಿಣೆ ಹಾಕಿ, ರೋಗ ನಿವಾರಣೆಯಾಗದೇ ಹೋದಾಗ ಕೈಕಟ್ಟಿಕೊಂಡು ಕುಳಿತು ಪರಿತಪಿಸುವುದನ್ನು ಇಂದಿಗೂ ಕಾಣುತ್ತೇವೆ.

ಮಾನವ ಶರೀರವು ಸಹಜವಾಗಿಯೇ ರೋಗ ನಿರೋಧಿಸುವ ಶಕ್ತಿ ಪಡೆದಿದ್ದು, ಅನೇಕ ರೋಗಗಳು ತಾವಾಗಿಯೇ ಔಷಧೋಪಚಾರವಿಲ್ಲದೇ ಗುಣವಾಗುತ್ತವೆ. ಇದನ್ನೇ ಅಂತ್ರ, ಮಂತ್ರ, ನೀರು, ದೇವರ ಪ್ರಭಾವವೆಂದು ಪ್ರಚಾರ ಮಾಡುತ್ತಾರೆ. ಸಹಜವಾಗಿಯೇ, ಇನ್ನುಳಿದವರು ಅದನ್ನೇ ಅನುಸರಿಸುವುದುಂಟು. ಕೆಲಸಲ ಎಲ್ಲ ವಿಧಾನಗಳನ್ನೂ ಅನುಸರಿಸಿಯೂ ರೋಗಿಯು ಮರಣ ಹೊಂದಿದಾಗ, ಇಲ್ಲವೆ ರೋಗ ಗುಣವಾಗದೇ ಹೋದಾಗ, ಆಚರಿಸುವ ವ್ರತದಲ್ಲಿ ಏನೋ ವ್ಯತ್ಯಾಸವಾಗಿದೆಯೆಂತಲೋ ಅಥವಾ ಅವನ ಹಣೆಬರಹವೇ ಆ ರೀತಿಯಿತ್ತೆಂದೂ ಸುಮ್ಮನಾಗಿ ಬಿಡುತ್ತಾರೆ.

ಮೂಢನಂಬಿಕೆಯು ಜನರಿಂದ ಹಣವನ್ನು ಕಿತ್ತುಕೊಳ್ಳುವವರು ಸಾಕಷ್ಟಿದ್ದು, ಆ ವಿಧಾನಗಳ ಪ್ರಚಾರವು ನಿರಂತರವಾಗಿ ನಡೆದಿರುವವರಿಂದ ಈ ಮೂಢನಂಬಿಕೆಯನ್ನು ವಿರೋಧಿಸುವವರಿಗೆ ಒಂದು ಸಮಸ್ಯೆಯಾಗಿದೆ.

ಮೂಢನಂಬಿಕೆಯ ವಿಧಾನಗಳಿಂದ ರೋಗರುಜಿನಗಳು ಗುಣವಾಗುವುದಾದರೆ, ದೊಡ್ಡ ದೊಡ್ಡ ಆಸ್ಪತ್ರೆಗಳೇಕೆ ಇರಬೇಕು ? ವೈದ್ಯಕೀಯ ಸಂಶೋಧನೆಗಾಗಿ ದೇಶದ ಸಂಪತ್ತನ್ನೇಕೆ ವಿನಿಯೋಗಿಸಬೇಕು ? ವಿಜ್ಞಾನಿಗಳು ಹಗಲಿರುಳು ಶ್ರಮ ತೆಗೆದುಕೊಳ್ಳಬೇಕೇಕೆ ?

ಮೂಢನಂಬಿಕೆಯಿಂದ ಜನ ಮುಕ್ತರಾಗಬೇಕಾದರೆ ಬುದ್ಧಿ ಜೀವಿಗಳು, ಸುಶಿಕ್ಷಿತರು ಮೂಢನಂಬಿಕೆಗಳನ್ನು ಖಂಡಿಸಬೇಕು. ವಿಜ್ಞಾನದ ಲಾಭ ಪಡೆಯಲು ಜನಸಾಮಾನ್ಯರಿಗೆ ತಿಳಿಸಿ ಹೇಳಬೇಕು.

ಮಕ್ಕಳಿಗೆ ಬರುವ ರೋಗಗಳಂತೂ ಹೆಚ್ಚು ಅಪಾಯಕಾರಿ ಗಳಾಗಿದ್ದು ಚಿಕಿತ್ಸೆ ಕೊಡಿಸುವಲ್ಲಿ ವಿಳಂಬವಾದಷ್ಟು ಮಗುವು ಮರಣದ ಹಾದಿಯಲ್ಲಿರುತ್ತದೆ.

ಮಕ್ಕಳ ರೋಗಗಳಾದ ಮೈಲಿ ಬೇನೆ, ಪೋಲಿಯೋ, ಗೊಬ್ಬರ (ದಢಾರ), ನಾಯಿಕೆಮ್ಮು, ಗಂಟಲು ಬೇನೆ ಇತ್ಯಾದಿ ಗಳಿಗೆ ಯಾವ 'ಮಾರೆಮ್ಮ', 'ದ್ಯಾಮವ್ವ' ದೇವರ ಕೋಪ, ಶಾಪಗಳೂ ಕಾರಣವಲ್ಲ. ಪ್ರತಿಯೊಂದು ರೋಗಕ್ಕೆ ನಿರ್ದಿಷ್ಟ ವಾದ ರೋಗಾಣುಗಳೇ ಕಾರಣವಾಗಿರುತ್ತವೆ. ಆದ್ದರಿಂದ ನಾವಿಲ್ಲಿ ಪಾಲಕರ ಮೂಢನಂಬಿಕೆ, ಅಂಧಶ್ರದ್ಧೆ ಮಕ್ಕಳಿಗೆ ಯಾವ ರೀತಿ ಅಪಾಯವೆಸಗುತ್ತಿದೆ ಎಂಬುದನ್ನು ವಿವೇಚಿಸುವಾ.

ಮಕ್ಕಳಿಗೆ ಕೆಮ್ಮು ಹತ್ತಿದಾಗ ವೈದ್ಯರ ಬಳಿ ಹೋಗದೆ ಮೂಗಿಗೆ ಕುತ್ತಿಗೆಗೆ ಕೇರಿನ ರಸ, ಕಳ್ಳಿಹಾಲು, ಎಕ್ಕೆ ಹಾಲು, ಬೂದಿ ಹಚ್ಚುತ್ತಾರೆ. ಗಂಟಲ ನೋವು, ಮಂಡಿಕೆ (ಟಾನ್ಸಿಲ್ಸ್) ಗಳಾದಾಗ ತಿಕ್ಕಿಸುತ್ತಾರೆ; ಇಲ್ಲವೆ ಕೈಯಿಂದಲೇ ದೊಡ್ಡದಾದ ಮಂಡಿಕೆಗಳನ್ನು ಕಿತ್ತು ತೆಗೆಸುತ್ತಾರೆ. ಹೀಗಾಗಿ ಮಗುವು ವಿಪ ರೀತ ರಕ್ತಸ್ರಾವವಾಗಿ ಮರಣ ಹೊಂದಬಹುದು; ಇಲ್ಲವೆ ನಂಜು ಆಗಿ ಧನುರ್ವಾಯು ರೋಗವು ಅಂಟಬಹುದು. ಕೇರಿನ ರಸ, ಕಳ್ಳಿಯ ಹಾಲಿನಿಂದ ಸುಟ್ಟ ಗಾಯವಾಗಿ ಅಪಾಯವೇ ಹೊರತು ಮಗುವಿಗೆ ಒಳಿತಾಗುವದಿಲ್ಲ.

ಇನ್ನು ನಾಯಿಕೆಮ್ಮು (ಹೂಪಿಂಗ ಕಫ್) ಆದಾಗ ಸತ್ತ ನಾಯಿಯ ಹಲ್ಲು ಮಗುವಿನ ಕೊರಳಲ್ಲಿ ಕಟ್ಟುತ್ತಾರೆ; ಅಥವಾ ನಾಯಿಯ ಮೂತ್ರವನ್ನು ಮಗುವಿಗೆ ಕುಡಿಸುತ್ತಾರೆ; ಇದು ಶುದ್ಧ ತಪ್ಪು.

ಸಾಮಾನ್ಯ ಕೆಮ್ಮು ಆದರೆ ಅಷ್ಟೇನೂ ಅಪಾಯವಾಗದು. ಆದರೆ ಅದೇ ಡಿಫ್ತೀರಿಯಾದ ಕೆಮ್ಮು ಆದರೆ ಮಗುವಿನ ಪ್ರಾಣ ರಕ್ಷಣೆಯಲ್ಲಿ ಪ್ರತಿನಿಮಿಷವೂ ಮಹತ್ವದ್ದಾಗುತ್ತದೆ. ಕ್ಷಯ, ಪುಪ್ಪುಸದ ಇತರ ರೋಗಗಳಾಗಿದ್ದರೆ ಒಳಗೊಳಗೇ ರೋಗ ಬಲಿಯಬಹುದು.

ನಾಯಿ ಕಡಿದಾಗ, ಚೇಳು, ಹಾವು ಕಡಿದಾಗ ಮಂತ್ರ, ಅಂತ್ರ, ನೀರು ಹಾಕಿಸುವುದು, ಬೂದಿ ಹಚ್ಚುವುದನ್ನು ಮಾಡುತ್ತಾರೆ. ಆದರೆ ಎಲ್ಲ ನಾಯಿಗಳು ಕಡಿದಾಗ ರೋಗ ಬರುವುದಿಲ್ಲ. ಅದರಂತೆ ಎಲ್ಲ ಹಾವು, ಚೇಳುಗಳು ವಿಷದವಿರುವುದಿಲ್ಲ. ಇಂಥ ವೇಳೆಯಲ್ಲಿ ಅಂತ್ರ ಮಂತ್ರದಿಂದಲೇ ಗುಣವಾಯಿತೆಂದು ತಿಳಿದು ಅದನ್ನೇ ಪ್ರಚಾರ ಮಾಡುತ್ತಾರೆ. ಆದರೆ ಅದೇ ವಿಷದ ಹಾವು ಚೇಳುಗಳಾಗಿದ್ದರೆ, ನಾಯಿಯಜೊಲ್ಲಿನಲ್ಲಿ ವಿಷಾಣುಗಳಿದ್ದರೆ ಅಂತ್ರ, ಮಂತ್ರ, ನೀರು ಏನೂ ಪರಿಣಾಮ ಮಾಡುವುದಿಲ್ಲ. ಮಗು ಮರಣ ಹೊಂದಲೂಬಹುದು.

ಮಕ್ಕಳಿಗೆ ಫೀಟ್ಸ ರೋಗ ಬಂದಾಗ ಸಾಮಾನ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಂತೂ ಕಾಯ್ದ ಕಬ್ಬಿಣದ ಪಟ್ಟಿಯಿಂದ ಕೈಕಾಲಿನ ಸಂದುಗಳನ್ನು ಸುಡುತ್ತಾರೆ. ಮಗು ಮೂರ್ಛೆ ಬಂದರೆ ಮೂಗಿನಲ್ಲಿ ವನಸ್ಪತಿಯ ರಸ ಹಿಂಡುತ್ತಾರೆ. ಅಥವಾ

ಕಾಲಿನ ಬೆರಳುಗಳನ್ನು ಬಿಗಿಯಾಗಿ ಒಡಿದು ತಿಕ್ಕುತ್ತಾರೆ. ಇದ ರಿಂದ ಮಗುವಿಗೆ ಸುಟ್ಟ ಗಾಯವಾಗಿ ಹಾಗೂ ರಸದಿಂದ ಮೂಗಿನ ಒಳಪೊರೆಯು ಸುಟ್ಟು ಹಾನಿಯಾಗಬಹುದೇ ವಿನಃ ಮತ್ತೇನೂ ಲಾಭವಿಲ್ಲ.

ಮಕ್ಕಳಿಗೆ ಕಾಮಿಣಿ (ಜಾಂಡಿಸ್) ಆದಾಗ ಕಣ್ಣು ಹಸಿ ರಾದಾಗ ಅಥವಾ ಮಗು ಊಟ ಮಾಡದೇ ಹೋದರೆ ಮಂತ್ರದ ನೀರು ಕುಡಿಸುವುದು, ರಟ್ಟೆಗೆ ಹಸಿರು ಬಳ್ಳಿ ಹಾಕಿಸುವುದು, ಕೊರಳಲ್ಲಿ ಅಂತ್ರ ಕಟ್ಟಿಸುವುದು ಮುಂತಾದುವನ್ನು ಮಾಡು ತ್ತಾರೆ. ಕುಪ್ಪತ್ತು ಆಗಿದೆ ಅಂತಾ ಕಾಯ್ದ ಕಬ್ಬಿಣದ ಪಟ್ಟಿ ಯಿಂದ ಬೆಳಗಿನ ಜಾವ ಪಾದವನ್ನು ಸುಡುತ್ತಾರೆ. ಇವಲ್ಲದೆ ಹೊಟ್ಟೆ ಹಸಿಯದಿದ್ದರೆ, ವಾಂತಿ ಆಗುತ್ತಿದ್ದರೆ, ಭೇದಿ ಹತ್ತಿದರೆ "ದೃಷ್ಟಿ" ಆಗಿದೆ ಎಂದು ಒಂದು ತಾಟಿನಲ್ಲಿ ನೀರು ಹಾಕಿ ಅದರಲ್ಲಿ ಒಂದಿಷ್ಟು ಮಕ್ಕಳು ಸೇವಿಸುವ ಆಹಾರ ಹಾಕಿ ಅದರಲ್ಲಿ ಒಂದು ಮೇಣಬತ್ತಿ ಇಟ್ಟು ಅದರ ಮೇಲೊಂದು ಕೊಡವನ್ನು ಡಬ್ಬು ಹಾಕಿ ಮೂರು ಸಲ ಮಕ್ಕಳನ್ನು ದಾಟಿಸುತ್ತಾರೆ. ಅದು ಸಪ್ಪಳ ಮಾಡಿದಾಗ ಆಯ್ಯೋ ಮಗುವಿಗೆ ಎಷ್ಟು ತೊಂದರೆ ಯಾಗಿದೆ ಅಂತಾ ಉದ್ಗಾರ ತೆಗೆಯುತ್ತಾರೆ. ಇದು ಕೂಡಾ ಒಂದು ಹುಚ್ಚು ಕಲ್ಪನೆಯಲ್ಲದೇ ಮತ್ತೇನು ?

ಮಗುವಿಗೆ ಗೊಬ್ಬರ (ದಡಾರ) ಆದಾಗ ಗೊಬ್ಬರ ರೋಗಕ್ಕೆ ದೇವಿಯೇ ಕಾರಣವೆಂದು ವೈದ್ಯರ ಔಷಧಿ ಕೊಡಿಸಿ ದರೆ ದೇವಿ ಕೋಪಗೊಳ್ಳುವಳೆಂದು ತಿಳಿದು ದೇವಿಗೆ ೯ನೇ ದಿನ

ಹಣ್ಣು ಹಾಗೂ ದೀಪ ಹಚ್ಚುತ್ತಾರೆ. ಆದರೆ ಅನೇಕ ಸಲ ಗೊಬ್ಬರವು ಏನೂ ತೊಂದರೆ ಮಾಡದೇ ಯಾವುದೇ ಔಷಧೋಪಚಾರವಿಲ್ಲದೆ ಗುಣವಾಗಬಹುದಾದರೂ ನ್ಯುಮೋನಿಯಾ, ಪುಪ್ಪುಸರೋಗ, ಕಿವಿ ಸೋರುವುದು ಸೆಳವು ರೋಗ, ಪಾರ್ಶ್ವವಾಯು, ಮೆದುಳಿನ ರೋಗವಾದ ಎನ್‌ಸ್‌ಫಲೈಟಿಸದಂತಹ ತೊಡಕುಗಳು ಉತ್ಪತ್ತಿಯಾದರೆ ಇವಕ್ಕೆ ವೈದ್ಯರ ಔಷಧೋಪಚಾರವೇ ತಕ್ಕುದಾಗಿರುತ್ತದೆ. ಕಾರಣ ಗೊಬ್ಬರ ರೋಗ ಅಪಾಯರಹಿತವೆಂದು ತಿಳಿಯದೇ ದೇವರನ್ನು ಮೊರೆಹೋಗದೇ ವೈದ್ಯರ ಮೊರೆ ಹೋದರೆ ಮಗುವಿನ ಪ್ರಾಣ ರಕ್ಷಣೆ ಮಾಡಿದಂತಾಗುತ್ತದೆ.

ಮಗುವಿಗೆ ಭೇದಿ ಹತ್ತಿದಾಗ ಔಷಧಿ ಕೊಡಿಸದೇ ಹಲ್ಲು ಬರುವದೇ ಭೇದಿಗೆ ಕಾರಣವೆಂದು ನಿರ್ಲಕ್ಷಿಸುತ್ತಾರೆ. ಹೆಚ್ಚು ದಿನಗಳನ್ನು ಇದೇ ಒಂದು ಮೂಢನಂಬಿಕೆಯಲ್ಲಿ ಕಳೆದು "ಹಲ್ಲಿನ ಪಟ್ಟಿ" ಕಟ್ಟಿ ಮಗುವು ತೀರಾ ಕ್ಷೀಣವಾದಾಗ ವೈದ್ಯರಲ್ಲಿ ಹೋಗುತ್ತಾರೆ. ಭೇದಿಯಿಂದಾಗಿ ಮಗುವಿನ ದೇಹದಲ್ಲಿ "ನೀರು" ಕಡಿಮೆ ಆಗುವದಲ್ಲದೆ ತಿನ್ನಲೂ ಕೂಡಾ ಏನೂ ಕೊಡುವುದಿಲ್ಲ. ಹೀಗಾಗಿ ಆಹಾರದ ಕೊರತೆಯಿಂದ ಬಳಲುವದು. ಮಗು ಬಾಯಿ ಆರಿ ನೀರು, ನೀರು ಅಂದರೂ ನೀರು ಕುಡಿಸುವದಿಲ್ಲ. ನೀರಿನ ಅಂಶವು ಬಹಳ ಕಡಿಮೆಯಾದರೆ ಮಗು ಮರಣ ಹೊಂದುವದರಲ್ಲಿ ಸಂದೇಹವೇ ಇಲ್ಲ. ಕಾರಣ ಭೇದಿಗೂ, ಹಲ್ಲು ಬರುವದಕ್ಕೂ ಏನೂ ಸಂಬಂಧವಿಲ್ಲ. ಅಲ್ಲದೆ ಭೇದಿಯು ಪ್ರಮಾಣ ಎಷ್ಟೇ ಕಡಿಮೆ ಇರಲಿ, ವೈದ್ಯರ ಸಲಹೆ ಪಡೆಯು

ಬೇಕಲ್ಲದೆ ಮಗುವಿಗೆ ಆಹಾರ, ನೀರು, ಹಣ್ಣಿನರಸ ಸಾಕಷ್ಟು ಕೊಡಬೇಕು.

ಮಗುವಿಗೆ ಹೊಟ್ಟೆನೋವು ಬಂದಾಗ ಎಣ್ಣೆ ಹಚ್ಚಿ ಹೊಟ್ಟೆ ತಿಕ್ಕಿಸುತ್ತಾರೆ. ಹೊಟ್ಟೆನೋವಿಗೆ ಹಲವು ಕಾರಣಗಳಿದ್ದು, ಜಂತು ಹುಳಗಳಾಗಿರಬಹುದು; ಯಕೃತೆ, ಪಿತ್ತಕೋಶ, ಮೇದೋಜ್ಜೀರಕ ಗ್ರಂಥಿಯು, ಕರುಳುಬಾಲ, ಉರಿತ ಅಥವಾ ಯಾವುದೇ ತೊಂದರೆಯಿರಬಹುದು. ಕಾರಣ ಹೊಟ್ಟೆ ತಿಕ್ಕಿಸಿದರೆ ಇಲ್ಲವೆ 'ಘಟ್ಟೆ' ಬಿದ್ದಿದೆ ಅಂತಾ ಹೊಟ್ಟೆಯ ಮೇಲೆ ಮೇಣಬತ್ತಿ ಇಟ್ಟು, ಅವರ ಮೇಲೊಂದು ತಂಬಿಗೆ ಇಟ್ಟಾಗ ಸಾಮಾನ್ಯ ತೊಂದರೆಯಿದ್ದರೆ ಏನೂ ಅಪಾಯವಾಗದು. ಅದೇ ಕರುಳು ಬಾಲದ ಉರಿತ, ಜಠರದ ಹುಣ್ಣು ಆಗಿದ್ದರೆ ತಿಕ್ಕಿಸಿದಾಗ, ತಂಬಿಗೆ ಇಟ್ಟಾಗ, ಅವು ಒಡೆದು ಕರುಳು ತೂತು ಬಿದ್ದು ರಕ್ತಸ್ರಾವವಾಗಿ ಮಗು ಮರಣ ಹೊಂದುವುದು ನಿಶ್ಚಿತ.

**ಪೌಷ್ಠಿಕ ಆಹಾರದ ಕೊರತೆ:**

ಪೌಷ್ಠಿಕ ಆಹಾರದ ಕೊರತೆ ಶೇ. ೫೦ ರಿಂದ ಶೇ. ೬೦ ರಷ್ಟು ಮಕ್ಕಳು ಸತ್ವಯುತ ಆಹಾರದ ಅಭಾವದಿಂದ ಬಳಲುತ್ತಿದ್ದು, ಅದರಿಂದಾಗಿ ಬರುವ ಮಾರಕ ರೋಗಗಳಾದ ಕ್ವಾಷಿಯೋರ್ಕರ ಹಾಗೂ ಮೆರ್‍ಯಾಸ್ಮಸ್ ಆದಾಗ ಮಗುವಿನ ಕೈಕಾಲು ಬಾಯುವದಾಗಲಿ ಅಥವಾ ಮಗು ಸೊರಗಿದಾಗ ತಮ್ಮ ಮಗುವನ್ನು ಯಾರೋ 'ಮುಟ್ಟಿರುವರೆಂದು', 'ಮುಟ್ಟಿದ್ದಾಗಿದೆ' ಎಂದು ಕಿವಿಯಲ್ಲಿ ತಾಮ್ರದ ಮುರುವು ಚುಚ್ಚಿಸುತ್ತಾರೆ. ಕೊರಳಲ್ಲಿ ಸ್ವಾಮಿಗಳಿಂದ ಮಂತ್ರ ಬರೆಯಿಸಿ ಕಟ್ಟುತ್ತಾರೆ.

ಆದರೆ ರೋಗವು ತೀರಾ ಉಲ್ಬಣವಾದಾಗ ತಂದೆ–ತಾಯಿಗಳು ವೈದ್ಯರಲ್ಲಿ ಹೋಗಿ ಹೇಗಾದರೂ ಮಾಡಿ ಮಗುವನ್ನು ಬದುಕಿಸಿ ಎಂದು ಅಂಗಲಾಚಿ ಬೇಡಿಕೊಳ್ಳುತ್ತಾರೆ.

**"ರೋಗಕ್ಕೆ ಔತಣ"**

ಮಕ್ಕಳು ಆಟವಾಡುವಾಗ ಸಣ್ಣ ಪುಟ್ಟ ಗಾಯಗಳಾಗಿ ರಕ್ತಸ್ರಾವವಾಗುವದು ಸಾಮಾನ್ಯ. ರಕ್ತಸ್ರಾವ ತಡೆಗಟ್ಟಲು ಅಲ್ಲಿಯೇ ದೊರೆಯತಕ್ಕ ಮಣ್ಣು, ಬೂದಿ, ಮುಖಕ್ಕೆ ಹಚ್ಚುವ ಪೌಡರ ಇಲ್ಲವೆ ಶೆಗಣಿ, ಚಕ್ಕಡಿಯ ಎಣ್ಣೆ ಹಾಕಿ ಕಟ್ಟುತ್ತಾರೆ. ಗಾಯದ ಮೂಲಕವೇ ಧನುರ್ವಾಯು ರೋಗಾಣುಗಳು ದೇಹ ಸೇರುತ್ತವೆ. ಶೆಗಣಿ ಹಾಗೂ ಮಣ್ಣಿನಲ್ಲಿಯೇ ಈ ರೋಗಾಣು ಗಳು ಹೆಚ್ಚಾಗಿ ಇರುವದರಿಂದ ಅಂಥ ವಸ್ತುಗಳನ್ನೇ ಉಪ ಯೋಗಿಸಿದರೆ ನಾವೇ ಆ ಭಯಾನಕ ರೋಗವನ್ನು ಆಹ್ವಾನಿಸಿ ದಂತಾಗುತ್ತದೆ. ಕಾರಣ ಪಾಲಕರು ಮಕ್ಕಳಿಗೆ ಗಾಯಗಳಾದಾಗ ಬಿಸಿ ನೀರಿನಿಂದ ಗಾಯ ತೊಳೆದು ಸ್ವಚ್ಛವಾದ ಅರಿವೆಯಿಂದ ಕಟ್ಟಿದರೆ ಸಾಕು. ಅವಶ್ಯವಿದ್ದಲ್ಲಿ ವೈದ್ಯರ ಸಲಹೆ ಪಡೆಯುವು ದನ್ನು ಮರೆಯಬಾರದು.

ಮಗುವಿನ ಕಣ್ಣಲ್ಲಿ ಹರಳು ಅಥವಾ ಮತ್ತೇನಾದರೂ ಬಿದ್ದಾಗ ಕೆಲವರು ನಾಲಿಗೆಯಿಂದ ತೆಗೆಯುತ್ತಾರೆ. ಇದು ಕಣ್ಣಿಗೆ ಮತ್ತಷ್ಟು ಗಾಯ ಮಾಡುತ್ತದಲ್ಲದೇ ರೋಗಾಣುಗಳ ಪ್ರವೇಶಕ್ಕೂ ಕಾರಣವಾಗಬಹುದು. ಇದರಿಂದ ಮಗುವಿನ ಕಣ್ಣಲ್ಲಿ ಹುಣ್ಣುಗಳಾಗಿ ದೃಷ್ಟಿ ನಾಶವಾಗಲೂಬಹುದು. ಕಾರಣ ಅಂಥ ತೊಂದರೆಗಳೇನಾದರೂ ಆದಾಗ ಸ್ವಚ್ಛವಾದ ಅರಿವೆಯ ತುದಿಯಿಂದ ಹರಳು ಹೊಲಸು ತೆಗೆಯಬೇಕು. ●

## ಉಪನ್ಯಾಸ ಗ್ರಂಥಮಾಲೆಯ ಕೆಲವು ಪ್ರಕಟನೆಗಳು

---



---


**ಪ್ರಸಾರಾಂಗ**

**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ**